ಋುಗ್ವೇದ | ಓಂ | ಸಾಮವೇದ

# ವೇದಪ್ರಕಾಶ

ಯಜುರ್ವೇದ | ಕೃಣ್ವಂತೋ ವಿಶ್ವಮಾರ್ಯಂ | ಅಥರ್ವವೇದ

ಸಂಪುಟ ೮ | ದುಂದುಭಿ ಸಂವತ್ಸರದ ಫಾಲ್ಗುಣ ಫೆಬ್ರವರಿ ೧೯೮೩ | ಸಂಚಿಕೆ ೧೧

**ಸತ್ಯದರ್ಶಕರಿಗೆ–ತತ್ವನಿಷ್ಠರಿಗೆ–ವಿಚಾರವಾದಿಗಳಿಗೆ**

**ಮೆಚ್ಚಿಗೆಯ ಮಾಸಪತ್ರಿಕೆ**

ವಿಷಯ ಸೂಚಿ — ಪುಟ ಸಂಖ್ಯೆ



**ನಾಲ್ಕೂ ವೇದಗಳ ಕುರಿತು, ಅಖಿಲ ಕರ್ಣಾಟಕದಲ್ಲಿ ಪ್ರಕಟವಾಗುವ ಏಕೈಕ ಮಾಸಪತ್ರಿಕೆ "ವೇದಪ್ರಕಾಶ"**



ವಾರ್ಷಿಕ ಚಂದಾ : ಅಂಚೆ ಸೇರಿ ರೂ ೧೫ ೦೦
ಅಜೀವ ಸದಸ್ಯರಿಗೆ ರೂ ೧೫೦ ೦೦

'ಕರ್ನಾಟಕದಲ್ಲಿ ಹೊಸ

ವಾತಾವರಣ

ಈಗ ಜನತೆಯ ಸರ್ಕಾರ'

ಪರಿಶುದ್ಧ ಆಡಳಿತ; ಸರಳ ನಡವಳಿಕೆ; ಪ್ರಾಮಾಣಿಕ ಉದ್ದೇಶ

ದಲಿತರ ಬಗೆಗೆ ಚಿಂತನೆ; ಶೀಘ್ರ ಆಡಳಿತ ಕ್ರಮ....ಇವು

ಈ ಹೊಸ ಸರ್ಕಾರದ ಗುಣಧರ್ಮಗಳು

ನಮ್ಮ ರಾಜಕೀಯದಲ್ಲಿ ನೈತಿಕ ಮೌಲ್ಯಗಳ ಪುನರುಜ್ಜೀವನದ ಪರಮ

ಪ್ರಾಶಸ್ತ್ಯವನ್ನು ನಮ್ಮ ಜನತೆ ಅರಿಯಬೇಕು ಮತ್ತು ಪುನರುಜ್ಜೀವನ

ಗೊಳಿಸುವ ಕಾರ್ಯದಲ್ಲಿ ನೆರವು ನೀಡಬೇಕು.

ಜಯಪ್ರಕಾಶ ನಾರಾಯಣ್

ಪ್ರಕಟಣೆ:

ವಾರ್ತಾ ಮತ್ತು ಪ್ರಚಾರ ಇಲಾಖೆ

ಕರ್ನಾಟಕ ಸರಕಾರ

ಬೆಂಗಳೂರು



# ವೇದ ಪ್ರಕಾಶ



ಸಂಪುಟ ೮  ದುಂದುಭಿ ಸಂವತ್ಸರ ಮಾಘ - ಫೆಬ್ರುವರಿ-೧೯೮೩  ಸಂಚಿಕೆ ೧೧

## ವೈದಿಕ ಪ್ರಾರ್ಥನೆ

**ಓಂ ಆಯಂತ ಇಧ್ಮ ಆತ್ಮಾ ಜಾತವೇದಸ್ತೇನೇ
ಧ್ಯಸ್ವ ವರ್ಧಸ್ವ ಚೇದ್ಧ ವರ್ಧಯ ಚಾಽಸ್ಮಾನ್
ಪ್ರಜಯಾ ಪಶುಭಿರ್ಬ್ರಹ್ಮವರ್ಚಸೇನಾನ್ನಾದ್ಯೇನ
ಸಮೇಧಯ ಸ್ವಾಹಾ। ಇದಮಗ್ನಯೇ ಜಾತ
ವೇದಸೇ ಇದನ್ನ ಮಮ॥** ಆ. ಗೃ ೧-೧೦-೧೨

**ಅರ್ಥ :-** [ಜಾತವೇದಃ] ಚರಾಚರ ಜಗತ್ತಿನ ಸಮಸ್ತ ಪದಾರ್ಥಗಳಲ್ಲಿ ವಿದ್ಯಮಾನನಾಗಿರುವ ಅಗ್ನಿಯೇ ! [ಅಯಂ ಆತ್ಮಾ ತೆ ಇಧ್ಮ] ಈ ಆತ್ಮನೇ ನಿನಗರ್ಪಿಸಲ್ಪಡ ಬೇಕಾದ ಸಮಿತ್ತಾಗಿದ್ದಾನೆ. [ತೇನ ಇಧ್ಯಸ್ವ] ಇದರಿಂದ ನೀನು ಪ್ರದೀಪ್ತನಾಗು [ವರ್ಧಸ್ವ] ವೃದ್ಧಿಯನ್ನು ಹೊಂದು. [ಚ ಇತ್ ಧ] ಸ್ವಯಂ ಸಮೃದ್ಧನಾಗಿ ನಮ್ಮನ್ನೂ [ಪ್ರಜಯಾ] ಪ್ರಜೆ ಅರ್ಥಾತ್ ಶ್ರೇಷ್ಠ ಸಂತಾನ, [ಪಶುಭಿಃ] ಪಶು ಸಂಪತ್ತು [ಬ್ರಹಪರ್ಚಸೇನ] ಬ್ರಹ್ಮವರ್ಚಸ್ಸು ಹಾಗೂ [ಅನ್ನಾದ್ಯೇನ] ಅನ್ನಾದಿ ಲೌಕಿಕ ಸಂಪತ್ತುಗಳ ಮೂಲಕ [ವರ್ಧಯ] ಸಮೃದ್ಧರನ್ನಾಗಿ ಮಾಡು ಮತ್ತು [ಸಮೇಧಯ] ನಿನ್ನಂತೆಯೇ ನಮ್ಮನ್ನೂ ಸಹ ಸುದೀಪ್ತರನ್ನಾಗಿಯೂ ಆತ್ಮಶಕ್ತಿಯುಳ್ಳವರನ್ನಾಗಿಯೂ ಮಾಡು [ಸ್ವಾಹಾ] ಇದೇ ನಮ್ಮ ಅಭಿಲಾಷೆ. [ಇದಂ ಅಗ್ನಯೇ ಜಾತವೇದಸೇ] ಇವೆಲ್ಲಾ ಆ ಪ್ರಕಾಶಸ್ವರೂಪ ಪರಮಾತ್ಮನಿಗೋಸ್ಕರವೇ ಸಮರ್ಪಿತವಾಗಿದೆ. [ಇದಂ ನ ಮಮ] ಇದರಲ್ಲಿ ನನ್ನದಾವ ಸ್ವಾರ್ಥವೂ ಇಲ್ಲ.

**ಭಾವಾರ್ಥ:-** ಪ್ರತಿಯೊಂದು ಕಣಕಣದಲ್ಲಿಯೂ ವಿದ್ಯಮಾನನಾಗಿರುವ ಪರಮಾತ್ಮನೇ! ನಿನ್ನ ಪ್ರಕಾಶದಿಂದಲೇ ಸೂರ್ಯ ಚಂದ್ರ ನಕ್ಷತ್ರಾದಿಗಳು ಬೆಳಗುತ್ತವೆ. ಆದರೆ ಆತ್ಮನು ಮಾತ್ರ ಅಜ್ಞಾನಾಂಧಕಾರದಲ್ಲಿ ತೊಳಲಾಡುತ್ತಿದ್ದಾನೆ. ಆದುದರಿಂದ ಇದನ್ನೇ ಸಮಿತ್ತನ್ನಾಗಿ ಅರ್ಪಿಸುತ್ತಿದ್ದೇನೆ. ಈ ಆತ್ಮನನ್ನು ಸಹ ನಿನ್ನಂತೆಯೇ ಸುದೀಪ್ತನನ್ನಾಗಿ ಮಾಡು. ನಿನ್ನ ಸಾಮೀಪ್ಯದಿಂದ ಆತ್ಮನೂ ನಿನ್ನಂತೆಯೇ ಬೆಳಗಲಿ. ಅದರೊಂದಿಗೆ ಪ್ರಜೆ, ಪಶು ಸಂಪತ್ತು ಬ್ರಹ್ಮವರ್ಚಸ್ಸು ಮತ್ತು ಅನ್ನಾದಿ ಲೌಕಿಕ ಸಂಪತ್ತು ನಮಗೆ ಲಭಿಸಲಿ ಇದಾವ ಸಂಪತ್ತೂ ನನ್ನ ಸ್ವಾರ್ಥಕ್ಕೋಸ್ಕರ ಅಪೇಕ್ಷಿಸುತ್ತಿಲ್ಲ. ನಿನ್ನ ಸಂಪತ್ತನ್ನು ನಿನಗೆ ಅರ್ಪಿಸುತ್ತೇನೆ. ಜನತಾ ಸೇವೆಯೇ ಜನಾರ್ಧನ ಸೇವೆ ಎಂಬಂತೆ ಪ್ರಾಣಿ ಮಾತ್ರರಿಗೆ ಅರ್ಪಿಸುತ್ತೇನೆ. ನಮಗೆಲ್ಲರಿಗೂ ಆತ್ಮಿಕ ಬಲವನ್ನು ನೀಡು. ಆನಂದವು ನಮಗೆ ಸದಾ ಲಭಿಸುತ್ತಿರಲಿ.

ಓಂ ಶಾಂತಿಃ ಶಾಂತಿಃ ಶಾಂತಿಃ

॥ ಸತ್ಯಮೇವ ಜಯತೇ ನಾऽನೃತಂ ॥

ಬಂಧುಗಳೇ ಭಗಿನಿಯರೇ,

ದೇಶದ ಅಭಿವೃದ್ಧಿ ವಿಕಾಸ, ರಾಷ್ಟ್ರದ ಸಂಘಟನೆ ಇವೆಲ್ಲವುಗಳು ಕೇವಲ ಬಾಯಿ ಮಾತುಗಳಾಗಿವೆಯೇ ವಿನಹ ಯಾವ ರೀತಿ ಮಾಡಬೇಕು ? ಯಾವ ರೀತಿ ಮಾಡಲು ಸಾಧ್ಯ? ಎಂಬುದರ ಬಗ್ಗೆ ಯಾರೂ ಇಂದು ಆಲೋಚಿಸುತ್ತಿಲ್ಲ. ವಸ್ತುತಃ ದೇಶದ ರಕ್ಷಣೆಯಾಗಬೇಕಾದರೆ, ದೇಶದ ಅಭಿವೃದ್ಧಿಯಾಗ ಬೇಕಾದರೆ, ಯಾವುದೇ ಒಂದು ದೇಶವನ್ನು ಸುಸಂಘಟಿತ ರಾಷ್ಟ್ರ ಎಂದು ಹೇಳಬೇಕಾದರೆ ಮೂರು ಕಾರ್ಯವನ್ನು ಮಾಡಬೇಕು. ಋಗ್ವೇದದಲ್ಲಿ ಇದನ್ನು ಸ್ಪಷ್ಟವಾಗಿ ಹೇಳಿದೆ.

**ಇಳಾ ಸರಸ್ವತೀ ಮಹಿ ತಿಸ್ರೋದೇವೀರ್ಮಯೋ ಭುವ ಃ।**
**ಬರ್ಹಿಸೀದಂತ್ವಸ್ರಿಧಃ ॥ ಋ. ೧-೧೨-೯**

[ಇಳಾ] ಮಾತೃಭಾಷೆ. [ಸರಸ್ವತಿ] ಮಾತೃ ಸಂಸ್ಕೃತಿ. [ಮಹಿ] ಮಾತೃಭೂಮಿ, ]ತಿಸ್ರೋದೇವಿ] ಮೂರು ದೇವತೆಗಳು, [ಮಯೋಭುವ:] ಕಲ್ಯಾಣಕಾರಿಣಿಯರಾಗಿದ್ದು ಸುಖವನ್ನು ಕೊಡುವವರಾಗಿದ್ದಾರೆ. [ಅಸ್ರಿಧಃ ಬರ್ಹಿಸೀದಂತು] ಈ ಮೂರು ದೇವತೆಗಳು ಯಾವಾಗಲೂನಮ್ಮ ಹೃದಯದಲ್ಲಿ ನಿವಾಸಿಸಲಿ. ಸದಾ ನಾವು ಈ ಮೂರು ದೇವತೆಗಳನ್ನು ಆರಾಧಿಸೋಣ, ರಕ್ಷಿಸೋಣ.

ಯಾವುದೇ ಒಂದು ದೇಶವನ್ನು ದೇಶ ಎಂದು ಹೇಳಬಹುದು. ಏಕೆಂದರೆ ದಿಶ್ಯತೆ ಅಸೌ ಸ ದೇಶ:- ಯಾವುದನ್ನು ಬೊಟ್ಟು ಮಾಡಿ ತೋರಿಸಲು ಸಾಧ್ಯವಿದೆಯೋ ಅದೇ ದೇಶ. ಆದರೆ ರಾಷ್ಟ್ರ ಅದಕ್ಕೆಯಾವುದೇ ಒಂದು ನಿಶ್ಚಿತವಾದ ಸೀಮೆಯಿರುವುದಿಲ್ಲ. "ರಾಜ್ೃ ದೀಪ್ತೌ" ಧಾತುವಿನಿಂದ ರಾಷ್ಟ್ರ ಶಬ್ದವು ನಿಷ್ಪನ್ನವಾಗಿದೆ. ಯಾವುದೇ ದೇಶವನ್ನು ರಾಷ್ಟ್ರ ಎಂದು ಹೇಳಬೇಕಾದರೆ ಋಗ್ವೇದದ ಆದೇಶದಂತೆ ನಡೆಯಬೇಕು. ಮೊದಲನೆಯದಾಗಿ ಭಾಷೆ. ಎಷ್ಟರತನಕ ಒಂದು ದೇಶಕ್ಕೆ ತನ್ನದೇ ಆದ ಒಂದು ನಿರ್ದಿಷ್ಟವಾದ ಭಾಷೆಯಿರುವುದಿಲ್ಲವೋ ಅಷ್ಟರತನಕ ಆ ದೇಶದ ಏಳಿಗೆಯಾಗಲು ಸಾಧ್ಯವಿಲ್ಲ. ಆ ದೇಶವು ಸುಸಂಘಟಿತವಾಗಲು ಸಾಧ್ಯವಿಲ್ಲ. ಅಷ್ಟು ಮಾತ್ರವಲ್ಲ ಆದೇಶವನ್ನುಬಹಳ ಬೇಗ ಆಕ್ರಮಿಸಿಕೊಂಡು ಗುಲಾಮರನ್ನಾಗಿ ಮಾಡಬಹುದು.

ವರ್ತಮಾನ ಕಾಲದಲ್ಲಿರುವ ಭಾರತದ ಶಿಕ್ಷಣ ಪದ್ಧತಿಯನ್ನು ತಂದವ ಮೆಕಾಲೆ. ಭಾರತವು ಬ್ರಿಟಿಷರ ಅಧೀನದಲ್ಲಿರುವಾಗ ಮೆಕಾಲೆ ಈ ಪದ್ಧತಿಯನ್ನು ತಂದ. ಅವನು ಸ್ಪಷ್ಟವಾಗಿ ಈ ರೀತಿ ತಿಳಿಸಿದ್ದಾನೆ. "ಯಾರು ಈ ಶಿಕ್ಷಣ ಪದ್ಧತಿಯಿಂದ ಶಿಕ್ಷಣವನ್ನು ಪಡೆಯುತ್ತಾರೋ ಅವರು ಶರೀರದಿಂದ, ರಕ್ತದಿಂದ ಮತ್ತು ಬಣ್ಣದಿಂದ ಭಾರತೀಯರೆನಿಸಿ ಕೊಳ್ಳಬಹುದು ಆದರೆ ಮಸ್ತಿಷ್ಕದಿಂದ ಎಂದೆಂದಿಗೂ ಪಾಶ್ಚಾತ್ಯರ ಗುಲಾಮರಾಗಿರುವರು". ಇಂದು ವಿಶ್ವದಲ್ಲಿ ಇಂಗ್ಲೀಷನ್ನು ಆಡುವವರು ಕೇವಲ 5%. 95%. ರಷ್ಟು ಜನರು ಆಡುವ ಭಾಷೆ ಬೇರೆಯೇ.

ಆಗಿದೆ. ಆದರೂ ಭಾರತದಲ್ಲಿ ಇದು ಪ್ರಮುಖ ಭಾಷೆಯಾಗಿ ರಾರಾಜಿಸುತ್ತಿದೆ. ಭಾರತದ ನೇತಾರರು ವಿಶ್ವಭಾಷೆ (Inter National language) ಎಂಬ ಹಣೆ ಪಟ್ಟಿಯನ್ನು ಹಚ್ಚಿ ಅದಕ್ಕೆ ಹೆಚ್ಚಿನ ಪ್ರಾಶಸ್ತ್ಯವನ್ನು ಕೊಡುತ್ತಿದ್ದಾರೆ.

ನಾವು ಸಾಧಾರಣವಾಗಿ ಎರಡು ರೀತಿಯ ಪಕ್ಷಿಗಳನ್ನು ಸಾಕುತ್ತೇವೆ. ಮೊದಲನೆಯದು ಗಿಳಿ ಎರಡನೆಯದು ತೀತರ್. ಇವೆರಡು ಪಕ್ಷಿಗಳನ್ನು ಸಾಕುವ ವಿಧಾನ ಬೇರೆ ಬೇರೆ. ಗಿಳಿಯನ್ನು ಸಾಕುವವರು ತಮ್ಮ ಭಾಷೆಯನ್ನು ಗಿಳಿಗೆ ಕಲಿಸುತ್ತಾರೆ. ನಮ್ಮ ಭಾಷೆಯನ್ನು ಗಿಳಿಗೆ ಕಲಿಸಲು ನಾವು ಸಮರ್ಥರಾದರೆ ಆ ಗಿಳಿ ನಮ್ಮನ್ನು ಬಿಟ್ಟು ಎಂದೆಂದಿಗೂ ಹೋಗುವುದಿಲ್ಲ. ಆದರೆ ತೀತರ್ ಹಾಗಲ್ಲ, ಅದು ಬಹಳ ಸ್ವಾಭಿಮಾನಿ. ತೀತರನ್ನು ಸಾಕುವವರು ತೀತರಿನ ಭಾಷೆಯನ್ನು ಕಲಿಯುತ್ತಾರೆ, ಆಗ ಅದು ಪೂರ್ಣವಾಗಿ ನಮ್ಮ ಸ್ವಾಧೀನವಾಗುತ್ತದೆ. ಬ್ರಿಟಿಷರು ಇವೆರಡು ವಿಧಾನದಿಂದಲೇ ನಮ್ಮನ್ನು ಗುಲಾಮರನ್ನಾಗಿ ಮಾಡಿದರು. ತಮ್ಮ ಭಾಷೆಯನ್ನು ನಮಗೆ ಕಲಿಸಿ ನಮ್ಮನ್ನು ಗಿಳಿಯನ್ನಾಗಿ ಮಾಡಿ ಪಂಜರದಲ್ಲಿಟ್ಟರು. ನಮ್ಮ ಭಾಷೆಯನ್ನು ಕಲಿತು ನಮ್ಮನ್ನು ತೀತರನ್ನಾಗಿ ಮಾಡಿ ಗೂಡಿನಲ್ಲಿ ಬಂಧಿಸಿದರು. ಮೊದಲೆ ಹೇಳಿದಂತೆ ಇಂದಿಗೂ ನಾವು ಪಾಶ್ಚಾತ್ಯರ ಗುಲಾಮರಾಗಿದ್ದೇವೆ. ಪಾಶ್ಚಾತ್ಯರ ಉಚ್ಛಿಷ್ಟ ಭೋಜನದಲ್ಲಿಯೇ ನಾವು ರುಚಿಯನ್ನು ಕಾಣುತ್ತಿದ್ದೇವೆ.

ವಿಶ್ವದ ಅನೇಕ ಭಾಷಾ ವಿಜ್ಞಾನಿಗಳು ಸೇರಿ ಸಂಪೂರ್ಣ ವಿಶ್ವಕ್ಕೆ ಒಂದು ಭಾಷೆಯನ್ನು ಮಾಡಬೇಕೆಂದು ಪ್ರಯತ್ನಿಸಿದರು. ಪರಿಣಾಮ ಸ್ವರೂಪ ಒಂದು ನವೀನ ಭಾಷೆಯ ನಿರ್ಮಾಣವಾಯಿತು, ಅದೇ "ಎಸ್ಪೆರೈಂತೊ". ಇದನ್ನು ವಿಶ್ವದಲ್ಲಿ ಮೊಟ್ಟ ಮೊದಲು ತಿರಸ್ಕರಿಸಿದವರು ಜಪಾನಿಗಳು ಮತ್ತು ರಷಿಯನರು. ಇದನ್ನು ಮೊಟ್ಟ ಮೊದಲು ಸ್ವೀಕಾರ ಮಾಡಿದವರು ಭಾರತೀಯರು. ಓ ಭಾರತೀಯ ನಿನ್ನಷ್ಟು ಮೂರ್ಖ ಪ್ರಪಂಚದಲ್ಲಿ ಇನ್ನಾರಿದ್ದಾರೆಯೆ ? ಭಾರತದ ನೇತಾರರು ಇದು ನಮ್ಮ ಹೃದಯ ವೈಶಾಲ್ಯತೆ ಎಂದು ತಮ್ಮ ಬೆನ್ನನ್ನು ತಾವೇ ತಟ್ಟಿಕೊಂಡರು. ಇದು ಹೃದಯ ವೈಶಾಲ್ಯತೆಯಲ್ಲ. ಮೂರ್ಖತೆಯ ಪರಾಕಾಷ್ಠೆ. ಎಷ್ಟರ ತನಕ ನಮ್ಮ ಭಾಷೆಯ ಮೇಲೆ ನಮಗೆ ಅಭಿಮಾನ, ಗೌರವ ಪ್ರೀತ್ಯಾದರಗಳಿರುವುದಿಲ್ಲವೋ ಅಷ್ಟರ ತನಕ ನಮ್ಮ ಅಭಿವೃದ್ಧಿಯಾಗಲು ಸಾಧ್ಯವಿಲ್ಲ. ಯಾವ ದೇಶಕ್ಕೆ ಒಂದು ತನ್ನದೇ ಆದ ನಿರ್ದಿಷ್ಟವಾದ ಭಾಷೆಯಿಲ್ಲವೋ ಆ ದೇಶವನ್ನು ಸುಸಂಘಟಿತ ರಾಷ್ಟ್ರ ಎಂದು ಹೇಳಲು ಎಷ್ಟು ಮಾತ್ರಕ್ಕೂ ಸಾಧ್ಯವಿಲ್ಲ. ವಿಭಿನ್ನತೆಯಲ್ಲಿ ಏಕತೆ ಎಂದು ತಮ್ಮ ಬೆನ್ನನ್ನು ತಾವೇ ತಟ್ಟಿಕೊಳ್ಳುತ್ತಾರೆ, ಅದೇ ಭಾಷೆಯ ಹೆಸರಿನಲ್ಲಿ ರಕ್ತದ ನದಿಯನ್ನು ಬೇಕಾದರೂ ಹರಿಸಲು ಸಿದ್ಧರಾಗುತ್ತಾರೆ. ಪತನದ ಅಂಚಿನಲ್ಲಿ ನಿಂತು ವಿನಾಶದ ನಿರೀಕ್ಷೆಯಲ್ಲಿ ನಿಂತ ಓ ಭಾರತೀಯ ಇನ್ನಾದರೂ ಕಣ್ದೆರೆದು ನೋಡು. ಇಲ್ಲವಾದರೆ ನಿನ್ನ ಸರ್ವನಾಶ ಖಂಡಿತ.

ಪ್ರತಿಯೊಂದು ಚೇತನದಲ್ಲಿ ಒಂದು ಆತ್ಮತತ್ವವಿದ್ದಂತೆ ಪ್ರತಿಯೊಂದು ರಾಷ್ಟ್ರಕ್ಕೂ ಆತ್ಮವಿದೆ. ಅದೇ ಸಂಸ್ಕೃತಿ ಮತ್ತು ಇತಿಹಾಸ. ಯಾವುದೇ ದೇಶವನ್ನು ನಾಶಮಾಡಬೇಕಾದರೆ ಅದರ ಮೇಲೆ ಯುದ್ಧ ಸಾರಬೇಕಿಲ್ಲ. ಆ ದೇಶದ ಇತಿಹಾಸ ಮತ್ತು ಸಂಸ್ಕೃತಿಯನ್ನು ನಾಶ

ಮಾಡಿದರೆ ಆ ದೇಶ ಕ್ರಮೇಣ ಹೇಳಹೆಸರಿಲ್ಲದಂತಾಗುತ್ತದೆ. ಬ್ರಿಟಿಷರು ಭಾರತವನ್ನು ಸಂಪೂರ್ಣವಾಗಿ ನಾಶಮಾಡಿ ಇದನ್ನು ಬ್ರಿಟಿಷರ ವಸಾಹತು ಮಾಡಬೇಕೆಂದು ಪ್ರಯತ್ನಪಟ್ಟರು. ಅವರು ನಮ್ಮ ಇತಿಹಾಸವನ್ನೇ ಬದಲಿಸಿದರು. ಭಾರತೀಯರು ಅಸಭ್ಯರಾಗಿದ್ದರು ಇವರಿಗೆ ಸಭ್ಯತೆಯು ಸಿಕ್ಕಿದ್ದು ಗ್ರೀಕಿನಿಂದ ಎಂದು ಹೇಳಿದರು, ಇಲ್ಲಿಯ ಜನರನ್ನು ಆರ್ಯರು ಮತ್ತು ದ್ರಾವಿಡರು ಎಂದು ಪ್ರತ್ಯೇಕಿಸಿದರು. ವೇದಗಳನ್ನು ಕುರುಬರ ಸಂಗೀತ ಎಂದು ಹೇಳಿದರು. ಸಂಸ್ಕೃತವನ್ನು ಮೃತ ಭಾಷೆಯೆಂದು ಹೇಳಿದರು: ಇವೆಲ್ಲವನ್ನೂ ಇಲ್ಲಿ ವಿವೇಚಿಸಬೇಕಾಗಿದೆ.

ಗ್ರೀಕ್‌ನಲ್ಲಿ ಮೂರು ಮಹಾ ದಾರ್ಶನಿಕರಾಗಿದ್ದಾರೆ. ಮೊದಲನೆಯವ ಸಾಕ್ರೆಟೀಸ್ ಎರಡನೆಯವ ಅವನ ಶಿಷ್ಯ ಪ್ಲೇಟೊ. ಮೂರನೆಯವ ಪ್ಲೇಟೋವಿನ ಶಿಷ್ಯ ಅರಿಸ್ಟಾಟಲ್ ಸಾಕ್ರೆಟೀಸ್ ಮಹಾದಾರ್ಶನಿಕನಾಗಿದ್ದ. ಅವನ ಶಿಷ್ಯ ಪ್ಲೇಟೊ ದಾರ್ಶನಿಕನೂ ರಾಜನೀತಿಜ್ಞನೂ ಆಗಿದ್ದ. ಪ್ಲೇಟೋವಿನ ಶಿಷ್ಯ ದಾರ್ಶನಿಕನೂ ರಾಜನೀತಿಜ್ಞನೂ ಕಲಾವಿದನೂ ಆಗಿದ್ದ. ವಿಶ್ವದಲ್ಲಿ ಮೊಟ್ಟ ಮೊದಲು ಟ್ರಾಜಿಡಿ (Tragedy) ಸಿದ್ಧಾಂತವನ್ನು ಪ್ರಾರಂಭಿಸಿದವ ಅರಿಸ್ಟಾಟಲ್. ಅರಿಸ್ಟಾಟಲ್ ಅಲೆಗ್ಸಾಂಡರ್ (ಸಿಕಂದರ್) ನ ಗುರುವಾಗಿದ್ದ

ಅಲೆಗ್ಸಾಂಡರ್ ಭಾರತದ ವಿಜಯಕ್ಕೋಸ್ಕರ ಹೊರಟಾಗ ತನ್ನ ಗುರುವಾದ ಅರಿಸ್ಟಾಟಲ್‌ನ ಚರಣ ಸ್ಪರ್ಶಮಾಡಿ, ಗುರುಗಳೇ! ಭಾರತದ ವಿಜಯಕ್ಕೋಸ್ಕರ ಹೊರಟಿದ್ದೇನೆ, ಭಾರತದಿಂದ ತಮಗೇನನ್ನು ತರಲಿ ಎಂದು ಕೇಳಿದ. ಆಗ ಅರಿಸ್ಟಾಟಲ್, ಅಲೆಗ್ಸಾಂಡರ್ ನೀನು ಭಾರತದಿಂದ ಬರುವಾಗ ನನಗೋರ್ವ ಗುರು ಮತ್ತು ಗಂಗೆಯ ನೀರನ್ನು ತಾ ಎಂದು ಹೇಳಿದ. ಅಲೆಗ್ಸಾಂಡರ್‌ಗೆ ಆಶ್ಚರ್ಯವಾಯಿತು. ಅವನು ಬಹಳ ವಿನಯದಿಂದ ಗುರುಗಳೇ, ತಾವು ಗ್ರೀಕ್ ದೇಶದ ಸರ್ವಶ್ರೇಷ್ಠ ದಾರ್ಶನಿಕರಾಗಿದ್ದೀರಿ, ತಮಗೋರ್ವ ಗುರುವಿನ ಅಗತ್ಯವಿದೆಯೇ ಅದೂ ಭಾರತದಿಂದ ? ಎಂದು ಕೇಳಿದ. ಆಗ ಅರಿಸ್ಟಾಟಲ್ ನಕ್ಕು ಅಲೆಗ್ಸಾಂಡರ್ ! ನಾನು ಗ್ರೀಕ್ ದೇಶದ ಸರ್ವ ಶ್ರೇಷ್ಠ ದಾರ್ಶನಿಕನಾಗಿರ ಬಹುದು, ಆದರೆ ನನ್ನಂತಹ ದಾರ್ಶನಿಕರು ನಿನಗೆ ಭಾರತದಲ್ಲಿ ಎಲ್ಲೆಲ್ಲಿಯೂ ಕಾಣಸಿಗುವರು. ಅಲ್ಲಿಯ ಗುರುಗಳೊಂದಿಗೆ ನನ್ನನ್ನು ಹೋಲಿಸಿದರೆ ನಾನು ತೃಣ ಸಮಾನ ಎಂದು ಹೇಳಿದ ಆ ನಿರಭಿಮಾನಿ ದಾರ್ಶನಿಕ, ಅವನು ಹೇಳಿದುದರಲ್ಲಿ ಎಳ್ಳಷ್ಟು ಅಸತ್ಯವಿಲ್ಲ ಅದು ಅಕ್ಷರಶ: ಸತ್ಯ. ಕಪಿಲ. ಕಣಾದ, ಗೌತಮ, ವ್ಯಾಸ, ಪತಂಜಲಿ, ಯಾಜ್ಞವಲ್ಕ್ಯ, ಮಹೀದಾಸ ಐತರೇಯ, ಪಿಪ್ಪಲಾದ. ಗಾರ್ಗಿ, ಮೈತ್ರೇಯಿ, ಯಮೀ ವೈವಸ್ವತಿ, ಇಂದ್ರಾಣಿ ಮೊದಲಾದ ಉಚ್ಚಕೋಟಿಯ ಋಷಿ ಮಹರ್ಷಿ ಆಚಾರ್ಯ ದಾರ್ಶನಿಕರೊಂದಿಗೆ ತುಲನೆಯಾದರೂ ಮಾಡಲು ಸಾಧ್ಯವೇ? ಇಂದ್ರ, ಶಿವ ದಿವೋದಾಸ ಧನ್ವಂತರಿ, ಚರಕ, ಸುಶ್ರುತ, ಆಚಾರ್ಯ ನಂದಿ ಮೊದಲಾದ ಋಷಿಗಳೂ ಭೈಷಜ್ಯರತ್ನರೂ ಆದವರೊಂದಿಗೆ ಸರಿ ಸಾಟಿಯಾಗಿ ನಿಲ್ಲುವವರು ಗ್ರೀಕ್‌ನಲ್ಲಿ ಆಗಿದ್ದಾರೆಯೇ ? ಸಮಸ್ತ ಚರಿತ್ರಕಾರರಿಗೆ ನಾವೆಸಗುವ ಸವಾಲು. ಸಾಮರ್ಥ್ಯವಿದ್ದವರು ನಮಗಿದರ ಸಮರ್ಪಕವಾದ ಪ್ರಮಾಣ ಸಹಿತ ಉತ್ತರವನ್ನು ಕೊಡಲಿ.

ಭಾರತೀಯರನ್ನು ಆರ್ಯ ದ್ರಾವಿಡ ಎಂದು ಪ್ರತ್ಯೇಕಿಸಲಾಯಿತು. ಇವೆರಡು ಶಬ್ದಗಳ ಅರ್ಥವನ್ನು ಬಲ್ಲವರು ಬಹಳ ಕಡಿಮೆ "ಅರ್ಯಸ್ವಾಮಿ ವೈಶ್ಯಯೋ:" ಎಂಬ ಧಾತುವಿ

ನಿಂದ ಆರ್ಯ ಶಬ್ದ ನಿಷ್ಪನ್ನವಾಗಿದೆ. ಪರಮಾತ್ಮನು ಎಲ್ಲರಿಗಿಂತ ದೊಡ್ಡ ಸ್ವಾಮಿಯೂ ಐಶ್ವರ್ಯ ಶಾಲಿಯೂ ಆಗಿದ್ದಾನೆ. ಆದುದರಿಂದ ಅವನನ್ನು ಆರ್ಯ ಎಂದು ಹೇಳುತ್ತಾರೆ.

ನಾವೆಲ್ಲರೂ ಪರಮಾತ್ಮನ ಮಕ್ಕಳಾದ ಕಾರಣ ಆರ್ಯರು ಎನಿಸಿಕೊಳ್ಳುತ್ತೇವೆ. ದ್ರಾವಿಡ ಎಂದರೇನು ಇದರ ಉತ್ತರ ಯಾರ ಬಳಿಯೂ ಇಲ್ಲ. ದ್ರವಿಣ ಎಂದರೆ ಸಂಪತ್ತು ಐಶ್ವರ್ಯ. ವೈದಿಕ, ಸಾಹಿತ್ಯ, ಲೌಕಿಕ ಸಾಹಿತ್ಯದಲ್ಲಿಯೂ ದ್ರವಿಣ ಎಂಬ ಶಬ್ದ ಸಿಗುತ್ತದೆ. ಆದರೆ ದ್ರಾವಿಡ ಎಂಬ ಶಬ್ದ ಎಲ್ಲಿಂದ ಬಂತು ಅದರರ್ಥವೇನು ಸಮಸ್ತ ಭಾಷಾ ವಿಜ್ಞಾನಿಗಳಿಗೆ ನಾವೆ ಸಗುವ ಸವಾಲಿದು ಸಾಮರ್ಥ್ಯವಿದ್ದವರು ಸಮರ್ಪಕವಾದ ಪ್ರಮಾಣ ಸಹಿತ ಉತ್ತರವನ್ನು ಕೊಡಲಿ.

ಬ್ರಿಟಿಷರ ಬಹುದೊಡ್ಡ ಆಕಾಂಕ್ಷೆ ಸಂಪೂರ್ಣ ಭಾರತವನ್ನೂ ಭಾರತೀಯರನ್ನೂ ಕ್ರಿಶ್ಚಿಯರನ್ನಾಗಿ ಮಾಡುವುದು. ಅದಕ್ಕೋಸ್ಕರ ಅವರು ಮಾಡಿದ ಬಹುದೊಡ್ಡ ಕಂತಂತ್ರ, ಸಂಸ್ಕೃತಿಯ ಆಧಾರ ಭೂತವಾದ ವೇದಗಳನ್ನೇ ನಾಶಮಾಡುವುದು. ಅದಕ್ಕೆ ಅವರು ಕಂಡು ಹಿಡಿದ ವಿಧಾನ ಈ ರೀತಿ ಇದೆ ಜರ್ಮನಿಯ ಶ್ರೇಷ್ಠ ವಿದ್ವಾಂಸ ಮೆಕ್ಸಮ್ಯೂಲರನನ್ನು ಆಕ್ಸಫೋರ್ಡ್ ವಿಶ್ವವಿದ್ಯಾಲಯಕ್ಕೆ ಕರೆ ತಂದು ಋಗ್ವೇದದ ಭಾಷಾಂತರವನ್ನು ಮಾಡಿಸಲಾಯಿತು. 1856ರಲ್ಲಿ ಅವನು History of ancient sanskrit litrature ಎಂಬ ಪುಸ್ತಕದಲ್ಲಿ ವೇದಗಳ ಕಾಲ 1200ಕ್ರಿ.ಪೂ. ಎಂದು ಹೇಳಿದ. ವೇದ ಮಂತ್ರಗಳ ಅರ್ಥವನ್ನು ಮನ ಬಂದಂತೆ ಮಾಡಿದ. ಋಗ್ವೇದದ ಭಾಷಾಂತರ ಮಾಡಿದ ನಂತರ ತನ್ನ ಪತ್ನಿಗೆ ಬರೆದ ಪತ್ರದಲ್ಲಿ ಈ ರೀತಿ ಸ್ಪಷ್ಟವಾಗಿ ಬರೆದಿದ್ದಾನೆ. "ನನ್ನ ಋಗ್ವೇದದ ಭಾಷಾಂತರ ಸಂಪೂರ್ಣವಾಗಿದೆ. ನನಗೀಗ ಬಹಳ ಸಂತೋಷವಾಗುತ್ತಿದೆ. ಇದರಿಂದ ಭಾರತದ ಸಂಸ್ಕೃತಿಯೇ ಅಡಿಮೇಲಾಗಂತ್ತದೆ ಸಮಸ್ತ ಭಾರತೀಯರು ಕ್ರಿಶ್ಚಿಯನರಾಗುತ್ತಾರೆ ಎಂದು ನಾನು ಆಶಿಸುತ್ತೇನೆ". ಇಂದಿಗೂ ನಮ್ಮ ಸಂಸ್ಕೃತಿಯ ಮೇಲೆ ಪ್ರಹಾರ ಮಾಡುತ್ತಿದ್ದಾರೆ. ಬೈಬಲ್ಲಿನ ಹೆಸರನ್ನು ಸತ್ಯ ವೇದ ಎಂದಿಟ್ಟಿದ್ದಾರೆ. ಯೇಸು ರಾಮಾಯಣ, ಯೇಸು ಭಾರತ ಯೇಸು ಭಾಗವತ ಮೊದಲಾದ ಗ್ರಂಥಗಳು ಸಂಸ್ಕೃತದಲ್ಲಿ ಸಿದ್ಧನಾಗಿವೆ. ಮೇಕ್ಸ ಮೂಲ್ಕರನು ಲೌಕಿಕ ಸಾಹಿತ್ಯ ಮತ್ತು ಭಾಷಾ ವಿಜ್ಞಾನದ ಬಗ್ಗೆಯೂ ಗ್ರಂಥಗಳನ್ನು ಬರೆದಿದ್ದಾನೆ, ನಾಟಕ. ಲಲಿತಕಲೆಯೂ ಗ್ರೀಕ್‌ನಿಂದ ಭಾರತಕ್ಕೆ ಬಂದುದು ಎಂದು ಹೇಳಿದ. ಅವನು ಆ ಬಗ್ಗೆ ಕೊಟ್ಟ ಒಂದೇ ಒಂದು ಪ್ರಮಾಣ ಈ ರೀತಿ ಇದೆ. ನಾಟಕಕ್ಕೆ ಬಳಸುವ ಅಂಕಪರದೆಗೆ ಸಂಸ್ಕೃತದಲ್ಲಿ ಯವನಿಕಾ ಎಂದು ಹೇಳುತ್ತಾರೆ. ಇದು ಯವನ ದೇಶದಿಂದ ಬಂದುದರಿಂದ ಇದನ್ನು ಯವನಿಕಾ ಎನ್ನುತ್ತಾರೆ. ಈ ರೀತಿ ನಾಟಕ ಮತ್ತು ಲಲಿತಕಲೆ ಗ್ರೀಕ್‌ನಿಂದ ಬಂದದ್ದು." ಬೇರಾವ ಪ್ರಮಾಣವನ್ನು ಅವನು ಕೊಡಲಿಲ್ಲ. ಪಾಶ್ಚಾತ್ಯರ ಎಂಜಲನ್ನು ಪ್ರಸಾದವೆಂದು ಸೇವಿಸುವ ಭಾರತೀಯ ವಿದ್ವಾಂಸರು ಇದನ್ನೇ ಸರಿಯೆಂದು ಹೇಳಿದರು.

ಇಂದು ಸಂಸ್ಕೃತಿ ಶಬ್ದದ ಅರ್ಥವನ್ನು ಬಲ್ಲವರು ಬಹಳ ಕಡಿಮೆ. ಯಾವ ರೀತಿ ಧರ್ಮಕ್ಕೆ Religion ಎಂದು ಹೇಳಿ ಅಪಾರ್ಥವನ್ನು ಮಾಡುತ್ತಾರೋ ಅದೇ ರೀತಿ ಸಂಸ್ಕೃತಿಗೆ Culture ಎಂಬ ಶಬ್ದವನ್ನು ಬಳಸಿ ಅಪಾರ್ಥವನ್ನು ಮಾಡುತ್ತಾರೆ. ಸಂಸ್ಕೃತಿ, ಸಂಸ್ಕಾರದ ಸಂಬಂಧ ಆತ್ಮನೊಂದಿಗಿದೆ. ಸಭ್ಯತೆಯ ಸಂಬಂಧ ಶರೀರದೊಂದಿಗಿದೆ. ಆಹಾರ ವಿಹಾರ,

ಆಚಾರ ವಿಚಾರ, ಉಡಿಗೆ ತೊಡಿಗೆ, ಆಮೋದ ಪ್ರಮೋದ ಲಲಿತಕಲೆ ಇವೆಲ್ಲವೂ ಸಭ್ಯತೆಯ ಉಪಾದೇಯಗಳಾಗಿವೆ. ಇವುಗಳಿಂದ ಯಾರನ್ನೂ ಸಂಸಂಸ್ಕೃತ ಎಂದು ಹೇಳಲು ಸಾಧ್ಯವಿಲ್ಲ ಸಂಸಂಸ್ಕೃತನಾಗ ಬೇಕಾದರೆ ಹೇಗಿರಬೇಕು. ಚಾಣಕ್ಯ ಈ ರೀತಿ ಹೇಳಿದ್ದಾನೆ.

ಯಥಾ ಚತುರ್ಭಿಃ ಕನಕಃ ಪರೀಕ್ಷ್ಯತೆ।
ನಿಘರ್ಷಣ ಛೇದನ ತಾಪ ತಾಡನೈಃ।
ತಥಾ ಚತುರ್ಭಿಃ ಮನುಷ್ಯಃ ಪರೀಕ್ಷ್ಯತೆ।
ತ್ಯಾಗೇನ ಶೀಲೇನ ಗುಣೇನ ಕರ್ಮಣಾ॥ (ಚಾಣಕ್ಯ ನೀತಿ)

ಯಾವ ರೀತಿ ಸುವರ್ಣವನ್ನು ಘರ್ಷಣೆ. ಛೇದನ, ಕರಗಿಸುವುದು ಮತ್ತು ಬಡಿಯುವುದು ಈ ನಾಲ್ಕು ರೀತಿಯಿಂದ ಪರೀಕ್ಷಿಸುತ್ತಾರೋ ಅದೇ ರೀತಿ ಮನುಷ್ಯನನ್ನು ತ್ಯಾಗ, ಶೀಲ, ಗುಣ ಮತ್ತು ಕರ್ಮ ಈ ನಾಲ್ಕರ ಮೂಲಕ ಪರೀಕ್ಷಿಸುತ್ತಾರೆ. ಅಹುದು ತ್ಯಾಗ ಶೀಲ ಗುಣ ಮತ್ತು ಕರ್ಮ ಇವೇ ಸಂಸ್ಕೃತಿಯ ಉಪಾದೇಯಗಳಾಗಿವೆ. ಸಜ್ಜನತೆ, ಸದ್ವಿವೇಕ, ವಿದ್ವತ್ತು, ವಿನಯ ಇವೇ ಸಂಸ್ಕೃತಿಯ ಪರಿಚಾಯಕಗಳಾಗಿವೆ. ಬ್ರಿಟಿಷರು ನಮ್ಮ ಸಂಸ್ಕೃತಿಯ ಮೂಲಾಧಾರವಾದ ಸಮಸ್ತ ವೈದಿಕ ಸಾಹಿತ್ಯವನ್ನು ವಿಕೃತಗೊಳಿಸಿದರು. ಆಹಾರ ವಿಹಾರ ಉಡಿಗೆ-ತೊಡಿಗೆ, ಲಲಿತಕಲೆ, ಆಚಾರ-ವಿಚಾರ ಮೊದಲಾದವುಗಳನ್ನು ಇಲ್ಲಿಯ ಜನರಿಗೆ ಕಲಿಸಿ ನಮ್ಮ ಸಭ್ಯತೆಯನ್ನು ವಿಕೃತಗೊಳಿಸಿದರು. ಆದರೆ ಒಂದು ವಿಷಯದಲ್ಲಿ ಮಾತ್ರ ತಪ್ಪಿ ಬಿದ್ದರು. ಯಾವ ಮೆಕ್ಸಮ್ಯೂಲರ್‌ನ ಮೂಲಕ ವೈದಿಕ ಸಾಹಿತ್ಯವನ್ನು ವಿಕೃತಗೊಳಿಸಲು ಪ್ರಯತ್ನಿಸಿದರೋ ಆ ಮೇಕ್ಸಮ್ಯೂಲರ್‌ನಲ್ಲಿ ಒಂದು ಉದಾತ್ತವಾದ ಗುಣ ಇತ್ತು. ತಾನು ಮಾಡಿದ್ದು ತಪ್ಪು ಎಂದು ತಿಳಿದೊಡನೆ ಕೂಡಲೇ ಸ್ಪಷ್ಟವಾಗಿ ತಾನು ಹೇಳಿದ್ದು ತಪ್ಪು ಎಂದು ಖಡಾ ಖಂಡಿತವಾಗಿ ಹೇಳುತ್ತಿದ್ದ. ಅವನು 1890ರಲ್ಲಿ ಒಂದು ಪುಸ್ತಕವನ್ನು ಬರೆದ India what can teach us ಇದರಲ್ಲಿ ಅವನು ಸ್ಪಷ್ಟವಾಗಿ ಇಷ್ಟರ ತನಕ ಸ್ವಾರ್ಥದಿಂದ ಪ್ರೇರಿತವಾಗಿ ಬರೆದದ್ದು ಆದುದರಿಂದ ಅದರ ಕಡೆಗೆ ಯಾವ ಗಮನವನ್ನೂ ಕೊಡಕೂಡದು. ವೇದಗಳ ಕಾಲದ ಬಗ್ಗೆ ಅವನು ಈ ರೀತಿ ಬರೆದ ವೇದಗಳ ರಚನೆ 1200, 1500, 2000 ಅಥವಾ 3000 ಕ್ರಿಸ್ತಪೂರ್ವಯಾದುದು ಎಂದು ಹೇಳಲು ಸಾಧ್ಯವಿಲ್ಲ. ಸತ್ಯವಾಗಿ ಹೇಳುವುದಾದರೆ ಇದು ಯಾವಾಗ ನಿರ್ಮಾಣವಾದುದು ಎಂದು ನಿಶ್ಚಿತವಾಗಿ ಹೇಳುವ ಶಕ್ತಿಯು ಈ ಪ್ರಪಂಚದಲ್ಲಿಲ್ಲ (Nopower on earth could ever fix) ವೇದ ಮಂತ್ರಗಳ ಸಂಕಲನವಾಗಿದೆ, ಅದನ್ನು ಹಲವರು ಸೇರಿ ಬರೆದರು ಎಂದು ಹೇಳಿದ ಮೇಕ್ಸ ಮ್ಯೂಲರ್ ಋಗ್ವೇದದ ನಾಸದೀಯ ಸೂಕ್ತದ ಅಧ್ಯಯನ ಮಾಡಿದ ಬಳಿಕ ಈ ರೀತಿ ಬರೆದ "ಮಾನವ ಮಸ್ತಿಷ್ಕದಿಂದ ಇಷ್ಟು ಉಚ್ಚಕೋಟಿಯ ದಾರ್ಶನಿಕತೆ ಪ್ರಸ್ಫುಟಿತವಾಗಲು ಸಾಧ್ಯವಿಲ್ಲ. ನಿಶ್ಚಿತವಾಗಿಯೂ ಇದು ಯಾವುದೋ ಒಂದು ಅಲೌಕಿಕ ಶಕ್ತಿಯಿಂದ ನಿರ್ಮಾಣವಾಗಿದೆ." ಆದರೆ ನಮ್ಮ ದುರ್ಭಾಗ್ಯ ಭಾರತೀಯ ವಿದ್ವಾಂಸರು ಮೇಕ್ಸ ಮ್ಯೂಲರನು ಮೊದಲು ಬರೆದ ಪುಸ್ತಕಗಳನ್ನು ಮಾತ್ರ ನೋಡಿದರು. ತನ್ನ ಕೊನೆಗಾಲದಲ್ಲಿ ಬರೆದ ಪುಸ್ತಕಗಳನ್ನು ಯಾರೂ ನೋಡಲಿಲ್ಲ. ಎಷ್ಟರತನಕ ನಾವು ನಮ್ಮ ಸಂಸ್ಕೃತಿಯ ವಾಸ್ತವಿಕ ಸ್ವರೂಪವನ್ನು ತಿಳಿದು ಅದನ್ನು ರಕ್ಷಿಸುವುದಿಲ್ಲವೋ ಅಷ್ಟರ ತನಕ ನಮ್ಮ ದೇಶದ ಅಭಿವೃದ್ಧಿಯಾಗಲು ಸಾಧ್ಯವಿಲ್ಲ.

ಮೂರನೆಯ ದೇವತೆ ಮಾತೃಭೂಮಿ. ನಮ್ಮ ದೇಶ ನಮ್ಮ ರಾಷ್ಟ್ರ ಈ ಭೂಮಿ ನಮ್ಮ ತಾಯಿ ಅವಳನ್ನು ನಾವು ರಕ್ಷಿಸಬೇಕು ಎಂದು ನಾವು ಭಾವಿಸುವುದಿಲ್ಲವೋ ಅಷ್ಟರತನಕ ನಮ್ಮ ದೇಶದ ರಕ್ಷಣೆಯಾಗಲು ಸಾಧ್ಯವಿಲ್ಲ. ಭಾರತದಲ್ಲಿದ್ದು ಪಾಕಿಸ್ತಾನ ಮತ್ತು ಅರಬ್ಬಿನ ಕನಸು ಕಾಣುವವರು ಯಾವ ರೀತಿಯಲ್ಲಿ ಭಾರತದ ರಕ್ಷಣೆಯನ್ನು ಮಾಡಿಯಾರು ? ಇದನ್ನು ನಾವಿಂದು ಆಲೋಚಿಸಬೇಕಾಗಿದೆ. ಲಂಡನ್ನಿನಲ್ಲಿ ಒಂದು ವಿಶ್ವವಿಖ್ಯಾತ ವಸ್ತು ಸಂಗ್ರಹಾಲಯ ವಿದೆ. ಅಲ್ಲಿ ಹೋಗುವವರು ಮೊದಲು ತಮ್ಮ ಪರಿಚಯವನ್ನು ಬರೆಯಬೇಕು. ಒಮ್ಮೆ ಮೋತಿಲಾಲ ನೆಹರುರವರು ಅಲ್ಲಿಗೆ ಭೇಟಿಯನ್ನಿತ್ತರು. ಆಗ ಅವರು ತಮ್ಮ ಪರಿಚಯವನ್ನು ಯಾವ ರೀತಿ ಕೊಟ್ಟರು ಗೊತ್ತೇ ? "I am by chance Indian" ತಾನು ಭಾರತೀಯ ಎಂದು ಹೇಳಲು ಇವರಿಗೆ ನಾಚಿಗೆ. ಇಂಥವರು ನಮ್ಮ ದೇಶದ ನೇತಾರರಾಗಿದ್ದರು. ಇಂತವರ ಕೈಯಲ್ಲೆ ನಮ್ಮ ದೇಶದ ಭಾರವನ್ನು ಒಪ್ಪಿಸಿ ನಾವು ಹಾಯಾಗಿ ನಿದ್ರಿಸುತ್ತಿದ್ದೇವೆ. ದೇಶದ ರಕ್ಷಣೆ ಯಾವ ರೀತಿಯಾಗಲೂ ಸಾಧ್ಯ ಯಾರು ತಾನೆ ಮಾಡಬೇಕು ? ಇಂದು ನಮ್ಮ ದೇಶದಲ್ಲಿ ಕಾಶ್ಮೀರ ಪಂಜಾಬು ಅಸ್ಸಾಂ ಮೊದಲಾದ ಪ್ರಾಂತ್ಯಗಳು ಬಿಡಿಸಲಾದ ಒಗಟುಗಳಾಗಿವೆ. ದೇಶದ ವಿಘಟನಕಾರಿ ತತ್ವಗಳು ದೇಶವನ್ನು ನಾಶಮಾಡುತ್ತಿವೆ. ಇಂತಹ ಪರಿಸ್ಥಿತಿಯಲ್ಲಿ ದೇಶದ ಪ್ರತಿಯೋರ್ವ ನಾಗರಿಕನು ಎಚ್ಚೆತ್ತು ದೇಶದ ರಕ್ಷಣೆಗೆ ಕಟಿ ಬದ್ಧನಾಗಬೇಕು.

ಬಂಧುಗಳೆ ಇನ್ನಾದರೂ ನಾವು ಋಗ್ವೇದದ ಆದೇಶದ ಪಾಲನೆಯನ್ನು ಮಾಡೋಣ ಮಾತೃ ಭಾಷೆ ಮಾತೃ ಸಂಸ್ಕೃತಿ ಮತ್ತು ಮಾತೃಭೂಮಿ ಈ ಮೂರು ದೇವತೆಗಳ ರಕ್ಷಣೆಯನ್ನು ನಮ್ಮ ಪ್ರಾಣತೆತ್ತಾದರೂ ಮಾಡುವೆವು ಎಂದು ಪ್ರತಿಜ್ಞೆಯನ್ನು ಮಾಡೋಣ.

---

# ನಿರ್ಭಯತೆ

ಮೂಲ: **ಜಗದೀಶ ವಿದ್ಯಾರ್ಥಿ.** ಕನ್ನಡಾನುವಾದ: **ಗುಂಡ್ಮಿ ಚಂದ್ರಶೇಖರ ಐತಾಳ**

**ಯತೋ ಯತಃ ಸಮೀಹಸೇ ತತೋ ನೋ ಅಭಯಂ ಕುರು ।**
**ಶಂ ನಃ ಕುರು ಪ್ರಜಾಭ್ಯೋಽಭಯಂ ನಃ ಪಶುಭ್ಯಃ ॥**

(ಯಜುರ್ವೇದ : ೩೬-೨೨)

ವಿಘ್ನವಿಧ್ವಂಸಕ ಪರಮೇಶ್ವರ ! ನೀನು ಸಮ್ಯಕ್ ಚೇಷ್ಟೆಗಳನ್ನು ಮಾಡುವೆಡೆಗಳಲ್ಲೆಲ್ಲ ನಮಗೆ ಭಯವಿಲ್ಲದಂತೆ ಮಾಡು. ನಮ್ಮ ಪ್ರಜೆಗಳಿಗೂ, ಗೋವುಗಳಿಗೂ ನಿರ್ಭಯತೆಯನ್ನೂ ಸುಖವನ್ನೂ ಉಂಟುಮಾಡು.

**ಅಭಯಂ ನಃ ಕರತ್ಯಂತರಿಕ್ಷ ಮಭಯಂ ದ್ಯಾವಾಪೃಥಿವೀ ಉಭೇ ಇಮೇ ।**
**ಅಭಯಂ ಪಶ್ಚಾದಭಯಂ ಪುರಸ್ತಾದುತ್ತರಾದಧರಾದಭಯಂ ನೋ ಅಸ್ತು ॥**

(ಅಥರ್ವ : ೧೯-೧೫-೫)

ಅಂತರಿಕ್ಷವು ನಮಗೆ ಅಭಯವನ್ನು ನೀಡಲಿ. ದ್ಯುಲೋಕ ಪೃಥ್ವಿಗಳು ನಮಗೆ ನಿರ್ಭ

ಯಂತೆಯನ್ನು ಕೊಡಲಿ. ಹಿಂದಿನಿಂದಲೂ, ಮುಂದಿನಿಂದಲೂ ನಮಗೆ ಯಾವ ರೀತಿಯ ಭಯವೂ ಬಾರದಿರಲಿ. ಮೇಲಿನಿಂದಲೂ, ಕೆಳಗಿನಿಂದಲೂ ನಮಗೆ ಭಯವುಂಟಾಗದಿರಲಿ.

**ಅಭಯಂ ಮಿತ್ರಾದಭಯಮಮಿತ್ರಾದಭಯಂ ಜ್ಞಾತಾದಭಯಂ ಪುರೋಯಃ।**
**ಅಭಯಂ ನಕ್ತಮಭಯಂ ದಿವಾನಃ ಸರ್ವಾ ಆಶಾ ಮಮ ಮಿತ್ರಂ ಭವಂತು ||**

(ಅಥರ್ವ : ೧೯-೧೫-೬)

ನಮಗೆ ಮಿತ್ರರಿಂದ ಭಯವಾಗದಿರಲಿ. ಶತ್ರುವಿನಿಂದ ಭಯವಾಗದಿರಲಿ. ಪರಿಚಿತ ರಿಂದಲೂ, ಅಪರಿಚಿತದಿಂದಲೂ ನಮಗೆ ಭಯವಾಗದಿರಲಿ. ಜ್ಞಾತ, ಅಜ್ಞಾತಗಳಿಂದ ನಮಗೆ ಭಯವಾಗದಿರಲಿ. ರಾತ್ರಿ ನಮ್ಮ ಪಾಲಿಗೆ ನಿರ್ಭಯತೆಯಿಂದ ಕೂಡಿರಲಿ. ಹಗಲೂ ನಿರ್ಭಯತೆ ಇರಲಿ. ಎಲ್ಲ ದಿಕ್ಕುಗಳಲ್ಲಿರುವ ಜನರೂ ನಮಗೆ ಮಿತ್ರರೂ, ಸ್ನೇಹಿತರೂ ಆಗಿರಲಿ.

ಈ ಮಂತ್ರದಲ್ಲಿ 'ಅಮಿತ್ರಾದಭಯಂ' ಎಂಬುದರ ಮೊದಲು 'ಅಭಯಂ ಮಿತ್ರಾತ್' ಎಂಬ ಶಬ್ದವಿದೆ. ವೇದದಲ್ಲಿ ಎಂಥ ಅಸಂಗತ ವಿಚಾರವಿದೆ ಎಂದು ಇದನ್ನು ನೋಡಿ ಕೆಲವರು ಗೊಣಗುಟ್ಟಬಹುದು. ಮಿತ್ರರಿಂದ ಏನು ಭಯವಿರುವುದು ಸಾಧ್ಯ ? ಈ ಪ್ರಶ್ನೆಗೆ ಉತ್ತರ ವನ್ನು ವೃದ್ಧ ಚಾಣಕ್ಯನು ಬಹಳ ಸುಂದರವಾಗಿ ಹೇಳಿದ್ದಾನೆ.

**ನ ವಿಶ್ವಸೇತ್ಕು ಮಿತ್ರೇ ಚ ಮಿತ್ರೇ ಚಾಪಿ ನ ವಿಶ್ವಸೇತ್ ।**
**ಕದಾಚಿತ್ಕು ಪಿತಂ ಮಿತ್ರಂ ಸರ್ವ ಗುಹ್ಯಂ ಪ್ರಕಾಶಯೇತ್ ||**

(ಚಾಣಕ್ಯ ನೀತಿ : ೨-೬)

ಕುಮಿತ್ರನಲ್ಲಿ ವಿಶ್ವಾಸವನ್ನಿಡಬಾರದು; ಮಿತ್ರನಲ್ಲಿಯೂ ಸದಾ ವಿಶ್ವಾಸವನ್ನಿಡಬಾರದು. ಮಿತ್ರನಿಗೆ ಕೋಪ ಬಂದಾಗ ಎಲ್ಲ ರಹಸ್ಯಗಳನ್ನು ಬಯಲು ಮಾಡುತ್ತಾನೆ.

ರಹಸ್ಯಗಳನ್ನು ಬಯಲು ಮಾಡುವ ಮಿತ್ರನಷ್ಟು ಅನಿಷ್ಟಕಾರಿ ಶತ್ರುವೂ ಅಲ್ಲ. ಅದ ರಿಂದಲೇ ವೇದವು ಮೊದಲೇ ಮಿತ್ರನಲ್ಲಿ ಅಭಯವನ್ನು ಬೇಡಿರುವುದು ಸರ್ವಥಾ ಉಚಿತವೂ ಸಂಗತವೂ ಆಗಿದೆ.

ಇನ್ನೆಲ್ಲಿ ಅಭಯವಿರಬೇಕು ಎಂಬುದನ್ನು ವೇದ ಹೇಗೆ ಹೇಳಿದೆ ಎಂಬುದನ್ನು ನೋಡೋಣ :

**ಅಭಯಂ ಕೃಣುಹಿ ವಿಶ್ವತೊ ನಃ।**

(ಋಗ್ವೇದ : ೩-೪೭-೨)

ನಮಗೆ ಎಲ್ಲ ಕಡೆಗಳಿಂದಲೂ ಎಲ್ಲ ರೀತಿಯ ಭಯಗಳನ್ನು ನಿವಾರಿಸು.

**ಮಾಭೇಮ ಮಾ ಶ್ರಮಿಷ್ಮೋಗ್ರಸ್ಯ ಸಖ್ಯೇ ತವ।**

(ಋಗ್ವೇದ : ೮-೪-೭)

ಪರಮೇಶ್ವರ! ಅತಿಶಕ್ತಿಶಾಲಿಯಾದ ನಿನ್ನ ಮಿತ್ರತ್ವವನ್ನು ಗಳಿಸಿದ ನಾವು ಎಂದೂ ಭೀತರಾಗೆವು, ಎಂದೂ ಬಳಲುವುದಿಲ್ಲ.

**ಯದಂತಿ ಯಚ್ಚ ದೂರಕೇ ಭಯಂ ವಿಂದತಿ ಮಾಮಿಹ ।**
**ಪವಮಾನ ವಿ ತಜ್ಜಹಿ ॥**

(ಋಗ್ವೇದ : ೯-೬೭-೨೧)

ದುಷ್ಟದಲನ ಕರ್ತನೇ! ಈ ಪ್ರಪಂಚದಲ್ಲಿ ನನಗೆದೂರದೇಶದಿಂದಲೋ ಸಮೀಪ ದಿಂದಲೋ ಉಂಟಾಗುವ ಭಯವನ್ನು ನೀನು ಸಂಪೂರ್ಣವಾಗಿ ನಾಶಮಾಡು.

ವೈದಿಕ ವೀರನು ಆತ್ಮೋದ್ಬೋಧನದ ರೂಪದಲ್ಲಿಯೂ ಎಂಥ ಸುಂದರ ಭಾವನೆಗಳನ್ನು ವ್ಯಕ್ತಪಡಿಸಿದ್ದಾನೆ :

**ಯಥಾ ದ್ಯೌಶ್ಚ ಪೃಥಿವೀ ಚ ನ ಬಿಭೀತೋ ನ ರಿಷ್ಯತಃ ।**
**ಏವಾ ಮೇ ಪ್ರಾಣ ಮಾ ಬಿಭೇಃ ॥**

(ಅಥರ್ವ : ೨-೧೫-೧)

ದ್ಯುಲೋಕ ಪೃಥ್ವಿಗಳು ನಷ್ಟವಾಗದೆ ಹೆದರುವುದಿಲ್ಲವೋ ಹಾಗೆಯೇ ನನ್ನ ಪ್ರಾಣವೇ ! ನೀನೂ ಹೆದರದಿರು.

**ಯಥಾಹಶ್ಚ ರಾತ್ರೀ ಚ ನ ಬಿಭೀತೋ ನ ರಿಷ್ಯತಃ ।**
**ಏವಾ ಮೇ ಪ್ರಾಣ ಮಾ ಬಿಭೇಃ ॥**

(ಅಥರ್ವ : ೨-೧೫-೩)

ಹಗಲು ರಾತ್ರಿಗಳು ಯಾರಿಗೂ ಹೆದರದಿರುವಂತೆ, ಯಾರಿಂದಲೂ ಹಿಂಸಿತರಾಗದಂತೆ ನನ್ನ ಪ್ರಾಣವೇ! ಯಾರಿಗೂ ಹೆದರದಿರು.

**ಯಥಾ ಸೂರ್ಯಶ್ಚ ಚಂದ್ರಶ್ಚ ನ ಬಿಭೀತೋ ನ ರಿಷ್ಯತಃ ।**
**ಏವಾ ಮೇ ಪ್ರಾಣ ಮಾ ಬಿಭೇಃ ॥**

(ಅಥರ್ವ : ೨-೧೫-೨)

ಸೂರ್ಯ ಚಂದ್ರರು ಯಾರಿಗೂ ಹೆದರದಿರುವಂತೆ, ಯಾರಿಂದಲೂ ಹಿಂಸಿತರಾಗದಂತೆ ನನ್ನ ಪ್ರಾಣವೇ! ನೀನೂ ಹೆದರದಿರು.

ಈ ರೀತಿಯಲ್ಲಿ ವೈದಿಕ ಭಾವನೆಗಳಿಂದ ಕೂಡಿದ ವೈದಿಕ ವೀರನು ಸಿಂಹದಿಂದಲೂ, ಚಿರತೆಯಿಂದಲೂ, ಸರ್ಪದಿಂದಲೂ, ಚೇಳಿನಿಂದಲೂ ಹೆದರುತ್ತಿರಲಿಲ್ಲ. ಅವನು ಸಾಹಸ ಪೂರ್ವಕವಾಗಿ ಘೋಷಿಸುತ್ತಾನೆ :

**ಘನೇನ ಹನ್ಮಿ ವೃಶ್ಚಿಕ ಮಹಿಂ ದಂಡೇನಾಗತಮ್ ।**

(ಅಥರ್ವ ೧೦-೪-೯)

ನನ್ನೆದುರು ಬರುವ ಸರ್ಪವನ್ನು ದಂಡದಿಂದಲೂ, ಚೇಳನ್ನು ಕಲ್ಲಿನಿಂದಲೂ ಸಾಯಿಸಿ ಬಿಡುವೆನು.

**ನಿರ್ಭಯತೆಯಿಂದಿರಲು ಎಂಥ ಉದಾತ್ತ ಭಾವನೆಗಳು ಇಲ್ಲಿವೆ!**

---

# ವೀರತೆಯ ಉತ್ಸಾಹ

ವೀರತೆಯ ಉತ್ಸಾಹವಲ್ಲಿ ವೈದಿಕ ವೀರ ಎಂಥ ಸುಂದರ, ಅದ್ಭುತಗಾನ ಗೈಯುತ್ತಾನೆ ಎಂಬುದನ್ನು ಸ್ವಲ್ಪ ಅವಲೋಕಿಸಿರಿ :

**ತಪನೋ ಅಸ್ಮಿ ಪಿಶಾಚಾನಾಂ ವ್ಯಾಘ್ರೋ ಗೋಮತಾಮಿವ |**
**ಶ್ವಾನಃ ಸಿಂಹಮಿವ ದೃಷ್ಟ್ವಾ ತೇನ ವಿಂದಂತೆ ನ್ಯಂಚನಮ್ ॥**

(ಅಥರ್ವ : ೪-೩೬-೬)

ವ್ಯಾಘ್ರ ದನಗಳ ಹಿಂಡಿನ ಮಧ್ಯೆ ನುಗ್ಗಿ ಅವುಗಳನ್ನು ಚೆಲ್ಲಾಪಿಲ್ಲಿ ಮಾಡುವಂತೆ, ನಾನು ದುಷ್ಟರಾಕ್ಷಸರನ್ನೂ, ಪಿಶಾಚಗಳನ್ನೂ ಸಂತಪ್ತಗೊಳಿಸುತ್ತೇನೆ. ಸಿಂಹ ಎದುರಾದಾಗ ನರಿಗಳು ಓಡುವ ಹಾಗೆ ನನ್ನನ್ನು ನೋಡಿದ ಕೂಡಲೇ ಪಿಶಾಚಗಳು ಓಡುತ್ತವೆ; ಅಡಗಿಕೊಳ್ಳಲು ಎಲ್ಲಿಯೂ ಸ್ಥಳ ಸಿಗುವುದಿಲ್ಲ.

**ನ ಪಿಶಾಚೈಃ ಸಂ ಶಕ್ನೋಮಿ ನ ಸ್ತೇನೈರ್ನ ವನರ್ಗುಭಿಃ |**
**ಪಿಶಾಚಾಸ್ತಸ್ಮಾನ್ನಶ್ಯಂತಿ ಯಮಹಂ ಗ್ರಾಮಮಾವಿಶೇ ||**

(ಅಥರ್ವ : ೪-೩೬-೭)

ನಾನು ರಾಕ್ಷಸರೊಡನೆ, ಚೋರರೊಡನೆ, ಲೂಟಿಗಾರರೊಡನೆ, ಅಪರಾಧ ಮಾಡಿ ಕಾಡಿನಲ್ಲಿ ಅಡಗಿಕೊಂಡಿರುವ ಕಳ್ಳನೊಡನೆ ಸಂಧಿಮಾಡಿಕೊಳ್ಳಲಾರೆ. ನಾನು ಯಾವ ಗ್ರಾಮ, ನಗರಗಳಿಗೆ ಹೋದರೂ ಅಲ್ಲಿರುವ ಚೋರರೂ, ಪಿಶಾಚಗಳೂ ಓಡಿಹೋಗುತ್ತವೆ.

**ಯಂ ಗ್ರಾಮಮಾವಿಶತ ಇದಮುಗ್ರಂ ಸಹೋ ಮಮ |**
**ಪಿಶಾಚಾಸ್ತಸ್ಮಾನ್ನಶ್ಯಂತಿ ನ ಪಾಪ ಮುಪಜಾನತೇ ॥**

(ಅಥರ್ವ : ೪-೩೬-೮)

ಕಿವಿಯಿಟ್ಟು ಕೇಳಿರಿ! ನನ್ನ ಅಜೇಯ ಭಯಂಕರ ದಮನಕಾರಿಯಾದ ಬಲ ಯಾವ ಗ್ರಾಮವನ್ನು ತಲುಪುತ್ತದೋ ಅಲ್ಲಿಂದ ಚೋರರೂ, ಪಿಶಾಚಗಳೂ ಓಡಿಹೋಗುತ್ತಾರೆ; ಆ ಗ್ರಾಮದಲ್ಲಿ ಜನರೂ ಪಾಪ ಮಾಡುವುದಿಲ್ಲ.

ತನ್ನ ಆದಮ್ಯ ಬಲದ ಆಧಾರದಿಂದಲೇ ಮಹಾರಾಜ ಅಶ್ವಪತಿಯು ಸರಿಯಾಗಿಯೇ ಹೇಳಿದ್ದಾನೆ :

**ನ ಮೇ ಸ್ತೇನೋ ಜನಪದೇ ನ ಕದರ್ಯೋನ ಮದ್ಯಪಃ।**
**ನಾನಾಹಿತಾಗ್ನಿರ್ನಾವಿದ್ವಾನ್ನ ಸ್ವೈರೀ ಸ್ವೈರಿಣೀ ಕುತಃ ॥**

(ಛಾಂದೋಗ್ಯ : ೫-೧೧-೫)

ನನ್ನ ದೇಶದಲ್ಲಿ ಯಾವ ಕಳ್ಳನೂ ಇಲ್ಲ, ಯಾವ ಕೃಪಣನೂ ಇಲ್ಲ, ಯಾವ ಕುಡುಕನೂ ಇಲ್ಲ. ಅಯಾಜ್ಞಿಕರಿಲ್ಲ, ಮೂರ್ಖರಿಲ್ಲ. ನನ್ನ ರಾಜ್ಯದಲ್ಲಿ ವ್ಯಭಿಚಾರೀ ಪುರುಷರಿಲ್ಲ; ವ್ಯಭಿಚಾರಿಣೀ ಸ್ತ್ರೀ ಇರುವುದಾದರೂ ಹೇಗೆ ?

ವೈದಿಕ ವೀರ ಮುಂದುವರಿದು ಹೇಳುತ್ತಾನೆ :

**ಹಂತಾಹಂ ಪೃಥಿವೀಮಿಮಾಂ ನಿ ದಧಾನೀಹವೇಹವಾ ।**
**ಕುವಿತ್ಸೋಮಸ್ಯಾಪಾಮಿತಿ ॥**

(ಋಗ್ವೇದ : ೧೦-೧೧೯-೯)

ಸಹೋದರರೇ! ನನ್ನ ಶಕ್ತಿಯ ನಿಲಂಗಡೆ ಏನು ? ನಾನು ಸೋಮ ರಸ ಪಾನ ಮಾಡಿದವನು. ನಾನು ಬ್ರಹ್ಮಚರ್ಯ ಪಾಲನೆ ಮಾಡಿ ವೀರರಸದ ಸಂಚಯ ಮಾಡಿಕೊಂಡವನು. ಪರಿಣಾಮವಾಗಿ ನನ್ನಲ್ಲಿರುವ ಶಕ್ತಿಯಿಂದ ಸಮಸ್ತ ಪೃಥ್ವಿಯನ್ನೇ ಚೆಂಡನ್ನಾಗಿ ಮಾಡಿ ಅಲ್ಲಿಡಬಲ್ಲೆ, ಇಲ್ಲಿಡಬಲ್ಲೆ!

**ಓಷಮಿತ್ ಪೃಥಿವೀಮಹಂ ಜಂಘಾನೀಹವೇಹವಾ ।**
**ಕುವಿತ್ಸೋಮಸ್ಯಾಪಾಮಿತಿ ॥**

(ಋಗ್ವೇದ : ೧೦-೧೧೯-೧೦)

ಪೃಥ್ವಿಯ ಮಾತೇನು ? ನಾನು ಈ ಸೂರ್ಯನನ್ನೇ ಎಲ್ಲೆಂದರಲ್ಲಿಗೆ ಕಾಲುಚೆಂಡಿನಂತೆ ಹೊಡೆಯಬಲ್ಲೆ! ವೀರರಸವನ್ನು ಬಹುವಾಗಿ ಪಾನಮಾಡಿದ್ದೇನೆ.

ಈ ಸೋಮಪಾನ ಹೇಗಿರುತ್ತದೆ ? ಅದನ್ನೂ ಕೇಳಿ :

**ಸ್ವಾದುಷ್ಕಿಲಾಯಂ ಮಧುಮಾನ್ ಉತಾಯಂ ತೀವ್ರಃ ಕಿಲಾಯಂ ರಸವಾನ್ ಉತಾಯಂ ।**
**ಉತೋನ್ವಸ್ಯ ಪಪಿವಾಂಸ ಮಿಂದ್ರಂ ನಕಶ್ಚನ ಸಹತ ಆಹವೇಷು ॥**

(ಅಥರ್ವ : ೧೮-೧-೪೮)

ಸೋಮರಸ ತುಂಬ ಸವಿಯುಳ್ಳದು, ಮಧುರವಾದುದು, ಅತ್ಯಂತ ತೀಕ್ಷ್ಣವಾದುದೂ ಹೌದು; ಅದು ಆನಂದರಸಪೂರ್ಣವಾದುದು. ಏನೆಂದು ವರ್ಣಿಸಲಿ ? ಅದನ್ನು ಕುಡಿದವರನ್ನು ಯುದ್ಧದಲ್ಲಿಯೂ, ಸಂಘರ್ಷದಲ್ಲಿಯೂ ಯಾರೂ ಪರಾಜಿತಗೊಳಿಸುವುದು ಸಾಧ್ಯವಿಲ್ಲ ಎಂಬುದು ಎಲ್ಲದಕ್ಕಿಂತ ಮಹತ್ತ್ವಪೂರ್ಣವಾದುದು.

ಪುನಃ ವೈದಿಕ ವೀರನ ಉತ್ಸಾಹವನ್ನು ಓದಿ ನೀವೂ ಪ್ರೋತ್ಸಾಹಿತರಾಗಿರಿ :

**ಯಥಾ ಸೂರ್ಯೋ ನಕ್ಷತ್ರಾಣಾಮುದ್ಯಂಸ್ತೇಜಾಂಸ್ಯಾದದೇ ।**
**ಏವಾ ಸ್ತ್ರೀಣಾಂ ಚ ಪುಂಸಾಂ ಚ ದ್ವಿಷತಾಂ ವರ್ಚ ಆ ದದೇ ॥**
(ಅಥರ್ವ : ೭-೧೩-೧)

ಉದಯ ಸೂರ್ಯ ನಕ್ಷತ್ರಗಳ ತೇಜಸ್ಸನ್ನು ಕುಂದಿಸುವಂತೆ ನಾನು ದ್ವೇಷಿಸುವ ಸ್ತ್ರೀ ಪುರುಷರನ್ನು ನಿಸ್ತೇಜಗೊಳಿಸಬಲ್ಲೆ.

ಇಷ್ಟು ಶಕ್ತಿ ಶಾಲಿಯಾಗಿದ್ದರೂ ವೈದಿಕ ವೀರ ಅಧಿಕ ಉತ್ಸಾಹ ತಾಳ ಬೇಕೆಂದು ಪ್ರಾರ್ಥಿಸುತ್ತಾನೆ, ಕೇಳಿರಿ :

ವಾಯು ಗಣಗಳೇ! ನನ್ನನ್ನು ಉತ್ತಮ ರೀತಿಯಿಂದ ಮತ್ತನನ್ನಾಗಿ ಮಾಡಿರಿ. ಮಧ್ಯ ಲೋಕವೇ! ನೀನೂ ನನ್ನನ್ನು ಆನಂದಿತನನ್ನಾಗಿ ಮಾಡು. ಪ್ರಕಾಶ ಸ್ವರೂಪನಾದ ಪರಮಾತ್ಮ! ನೀನೂ ನನ್ನನ್ನು ಮದೋನ್ಮತ್ತನನ್ನಾಗಿ ಮಾಡು. ಈ ಸಮಸ್ತ ವಾಯು ಮಂಡಲವೇ ನನ್ನನ್ನು ಅನುಪ್ರಾಣಿತಗೊಳಿಸಿ ಮತ್ತನನ್ನಾಗಿ ಮಾಡಲಿ.

ಎಂಥ ಭವ್ಯ ಭಾವನೆಯಿದು! ಎಂಥ ಮನೋರಮ ವಿಚಾರವಿದು!

---

# ವಿಜಯಾಪೇಕ್ಷೆ

ವೇದ ಮನುಷ್ಯನನ್ನು ವಿಜೇತನನ್ನಾಗಿ ಮಾಡಲು ಅಪ್ಪಣೆ ಕೊಡುತ್ತದೆ. ವೇದದ ವಿಜಯ ಭಾವನೆಗಳಿಂದ ಪ್ರಭಾವಿತನಾಗಿ ವೀರ ಉಚ್ಚ ಸ್ವರದಿಂದ ಗಾನ ಗೈಯುತ್ತಾನೆ.

**ಕೃತಂ ಮೇ ದಕ್ಷಿಣೇ ಹಸ್ತೇ ಜಯೋ ಮೇ ಸವ್ಯ** ಆಹಿತಃ ।
**ಗೋಜಿದ್ ಭೂಯಾಸಮಶ್ವಜಿದ್ ಧನಂಜಯೋ ಹಿರಣ್ಯಜಿತ್** ॥
(ಅಥರ್ವ : ೭-೫೦-೮)

ನನ್ನ ಬಲಗೈಯಲ್ಲಿ ಕರ್ಮವಿದೆ, ಪುರುಷಾರ್ಥವಿದೆ; ಎಡಗೈಯಲ್ಲಿ ವಿಜಯವಿರುತ್ತದೆ. ನಾನು ನನ್ನ ಪರಿಶ್ರಮದಿಂದ ಇಂದ್ರಿಯಗಳನ್ನೂ, ಭೂಮಿಯನ್ನೂ, ಗೋಧನವನ್ನೂ, ಅಶ್ವಗಳನ್ನೂ, ಧನವನ್ನೂ, ಸ್ವರ್ಣವನ್ನೂ ಜಯಿಸಿದವನಾಗಿದ್ದೇನೆ.

ಈ ವಿಜಯಾಪೇಕ್ಷೆಯ ಜತೆಯಲ್ಲಿಯೇ ವೇದ ಸಂದೇಶ ನೀಡುತ್ತದೆ :

**ಇತೋ ಜಯೇತೋ ವಿಜಯ ಸಂ ಜಯ ಜಯ ಸ್ವಾಹಾ ।**
**ಇಮೇ ಜಯಂತು ಪರಾಮೀ ಜಯಂತಾಂ ಸ್ವಾಹೈಭ್ಯೋ ದುರಾಹಾಮೀಭ್ಯಃ ॥**
(ಅಥರ್ವ : ೮-೮-೨೪)

ವೀರ! ಇತ್ತ ಜಯವನ್ನು ಹೊಂದು. ಇತ್ತ ಈ ಕಡೆಯಿಂದ ವಿಜಯ ಪ್ರಾಪ್ತಿಯನ್ನು

ಹೊಂದು. ಒಳ್ಳೆಯ ರೀತಿಯಿಂದ ಜಯವನ್ನು ಸಂಪಾದಿಸು, ವಿಜಯಿಯಾಗು. ಜಗತ್ತಿನಲ್ಲಿ ನಿನ್ನ ಕೀರ್ತಿ, ಯಶೋಗಾನ ಕೇಳಿಬರಲಿ. ನಮ್ಮ ಯೋಧರು ವಿಜಯ ಶೀಲರಾಗಲಿ. ಶತ್ರುಗಳು ಪರಾಜಿತರಾಗಲಿ ಈ ಯೋಧರಿಗೆ ಉತ್ತಮ ಕೀರ್ತಿ ಲಭಿಸಲಿ. ಆ ಶತ್ರುಗಳಿಗೆ ಅಪಕೀರ್ತಿ ಪ್ರಾಪ್ತವಾಗಲಿ.

ನಾವು ಶತ್ರುಗಳನ್ನು ಹೇಗೆ ಗೆಲ್ಲಬಲ್ಲೆವು ಎಂಬ ಉಪಾಯವನ್ನು ವೇದ ಹೀಗೆ ಹೇಳುತ್ತದೆ:

**ಸ್ಥಿರಾ ವಃ ಸಂತ್ವಾಯುಧಾ ಪರಾಣುದೇ ವೀಳೂ ಉತ ಪ್ರತಿಷ್ಕಭೇ ।**
**ಯುಷ್ಮಾಕಮಸ್ತು ತವಿಷೀ ಪನೀಯಸೀ ಮಾ ಮರ್ತ್ಯಸ್ಯ ಮಾಯಿನಃ ॥**
(ಋಗ್ವೇದ : ೧–೩೯–೨)

ವೀರ ಯೋಧರೇ! ನೀವು ಯುದ್ಧ ಮಾಡುವ ಅಸ್ತ್ರಗಳು ಶತ್ರುಗಳನ್ನೋಡಿಸಿ ಅವರನ್ನು ದೂರ ಮಾಡುವಲ್ಲಿ ದೃಢವೂ ಶಕ್ತಿಯುತವೂ ಆಗಲಿ. ನಿಮ್ಮ ಸೇನೆ ಅತ್ಯಂತ ವ್ಯವಹಾರ ಕುಶಲವೂ, ಪ್ರಶಂಸನೀಯವೂ ಆಗಲಿ. ಅಲ್ಲದೆ, ಕುಟಿಲ ಮಾಯಾವೀ ಮನುಷ್ಯರ ಅಸ್ತ್ರ ಶಸ್ತ್ರ ಸೇನೆಗಳಂತೆ ಆಗದಿರಲಿ.

**ಧನ್ವನಾ ಗಾ ಧನ್ವನಾಜಿಂ ಜಯೇಮ ಧನ್ವನಾ ತೀವ್ರಾಃ ಸಮದೋ ಜಯೇಮ ।**
**ಧನುಃ ಶತ್ರೋರಪಕಾಮಂ ಕೃಣೋತಿ ಧನ್ವನಾ ಸರ್ವಾಃ ಪ್ರದಿಶೋ ಜಯೇಮ ॥**
(ಯಜುರ್ವೇದ : ೨೯–೩೯)

ಧನುಸ್ಸಿನಿಂದ ನಾವು ಗೋವುಗಳನ್ನೂ, ಭೂಮಿಯನ್ನೂ ಗೆಲ್ಲುವಂತಾಗಲಿ. ಧನುಸ್ಸಿನ ಬಲದಿಂದ ನಾವು ಸಂಗ್ರಾಮಗಳನ್ನು ಗೆಲ್ಲುವಂತಾಗಲಿ. ನಮ್ಮ ಧನುರ್ಬಲದಿಂದ ಸಮ್ಮುಖದಲ್ಲಿ ಆಕ್ರಮಿಸುವ ಹರ್ಷಚಿತ್ತರಾದ, ಮದಭರಿತರಾದ ಸೈನ್ಯವನ್ನು ಗೆಲ್ಲೋಣ. ನಮ್ಮ ಧನುಸ್ಸು ಶತ್ರುಗಳ ಅಪೇಕ್ಷೆಗಳನ್ನು ನಷ್ಟಗೊಳಿಸಲಿ! ಧನುಸ್ಸಿನಿಂದ ನಾವು ಸಕಲ ದಿಕ್ಕುಗಳಲ್ಲೂ ವಿಜಯ ಶಾಲಿಗಳಾಗೋಣ.

**ಅಭಿಧಾವತಾತಿ ಸರಾ ಇಂದ್ರಸ್ಯ ವಚಸಾ ಹತ ।**
**ಅವಿಂ ವೃಕ ಇವ ಮಥ್ನೀತ ಸ ವೋ ಜೀವನ್ ಮಾ ಮೋಚಿ ಪ್ರಾಣಮಸ್ಯಾಪಿ ನಹ್ಯತ ॥**
(ಅಥರ್ವ : ೫–೮–೪)

ಶೂರ ವೀರರೇ! ಓಡಿ, ವೇಗದಿಂದ ಮುನ್ನುಗ್ಗಿರಿ. ನಿಮ್ಮ ರಾಜರ ಅಪ್ಪಣೆಯಂತೆ ಶತ್ರುಗಳನ್ನು ನಾಶಮಾಡಿರಿ. ಟಗರು ಟಗರುಗಳನ್ನು ಮಥನ ಮಾಡುವಂತೆ ನೀನೂ ಶತ್ರು ಸೇನೆಯನ್ನು ತುಳಿದುಬಿಡು. ಎಚ್ಚರಿಕೆ! ಶತ್ರು ಬದುಕಿ ಉಳಿಯದಿರಲಿ. ಅವನ ಪ್ರಾಣವನ್ನು ಬಂಧಿಸಿ ಸಾಯಿಸಿ ಬಿಡು.

ಅಲ್ಲದೆ ಒಂದು ವಿಚಾರ ಯಾವಾಗಲೂ ಸ್ಮರಿಸಲು ಯೋಗ್ಯವಾಗಿದೆ. ಪ್ರಪಂಚದಲ್ಲಿ ವಿಜಯ ಯಾರದು ? ವೇದ ಜಯಭೇರಿ ಹೊಡೆಯುತ್ತ ಘೋಷಿಸುತ್ತದೆ :

**ಯೇಷಾಮಿಂದ್ರ ಸ್ತೇ ಜಯಂತಿ।** (ಋಗ್ವೇದ : ೮-೧೬-೫)

ಐಶ್ವರ್ಯಶಾಲೀ ಪರಮಾತ್ಮನ ಸಹಾಯವನ್ನು ಪಡೆದವರು ಯುದ್ಧದಲ್ಲಿ ವಿಜಯಶಾಲಿಗಳಾಗುತ್ತಾರೆ. ವಿಜಯಾಪೇಕ್ಷಿಗಳೇ! ಪರಮಾತ್ಮನನ್ನು ತಮ್ಮ ಸಖನನ್ನಾಗಿ ಮಾಡಿಕೊಂಡು ಪ್ರಾರ್ಥಿಸಿರಿ :

**ವಯಂ ಜಯೇಮ ತ್ವಯಾ ಯುಜಾ ವೃತಮಸ್ಮಾಕಮಂಶ ಮುದವಾ ಭರೇ ಭರೇ।**
**ಅಸ್ಮಭ್ಯಮಿಂದ್ರ ವರೀಯಃ ಸುಗಂ ಕೃಧಿ ಪ್ರ ಶತ್ರೂಣಾಂ ಮಘವನ್ ವೃಷ್ಣ್ಯಾ ರುಜ ॥** (ಅಥರ್ವ : ೭-೫೦-೪)

ಐಶ್ವರ್ಯಶಾಲಿ, ಸರ್ವಶಕ್ತಿಶಾಲಿಯಾದ ಪ್ರಭೋ! ನಿನ್ನೊಡನೆ ಸೇರಿ. ನಿನ್ನ ಕೃಪೆ, ಸಹಾಯಗಳಿಂದ ಕಂದಕ ಕಂದಕಗಳನ್ನು ಗೆಲ್ಲುವಂತಾಗಲಿ. ನೀನು ಪ್ರತ್ಯೇಕವಾಗಿ ನಮ್ಮ ಪಕ್ಷದ ರಕ್ಷಣೆಯನ್ನು ಚೆನ್ನಾಗಿ ಕೈಗೊಳ್ಳು. ನಮಗಾಗಿ ವಿಜಯಶ್ರೀಯನ್ನು ಸುಲಭ ಮಾಡಿಕೊಡು. ಭಗವಾನ್! ಶತ್ರುಬಲವನ್ನು ಮುರಿದು ಬಿಡು. ಅಲ್ಲದೆ,

**ಮಾಮಗ್ನೇ ವರ್ಚೋ ವಿಹ್ವನೇಷ್ವಸ್ತು ವಯಂ ತ್ವೇಂಧಾನಾಸ್ತನ್ವಂ ಪುಷೇಮ।**
**ಮಹ್ಯಂ ನಮಂತಾಂ ಪ್ರದಿಶಶ್ಚತಸ್ರಸ್ತ್ವಯಾಧ್ಯಕ್ಷೇಣ ಪೃತನಾ ಜಯೇಮ॥** (ಅಥರ್ವ : ೫-೩-೧)

ಹೇ ತೇಜೋರಾಶಿ! ಸಂಗ್ರಾಮ ಸಂಘರ್ಷಗಳಲ್ಲಿ ನನ್ನ ತೇಜಸ್ಸು ಪ್ರದೀಪ್ತವಾಗಲಿ. ನಮ್ಮ ಹೃದಯ ಮಂದಿರಗಳಲ್ಲಿ ನಿನ್ನ ಜ್ಯೋತಿ ಜ್ವಲಿಸುತ್ತಿರಲು ನಾವು ನಮ್ಮ ಆತ್ಮ, ಶರೀರಗಳನ್ನು ಪುಷ್ಟ ಹಾಗೂ ಬಲಶಾಲಿಯನ್ನಾಗಿ ಮಾಡಿಕೊಳ್ಳೋಣ. ಅವುಗಳಿಂದ ನಾಲ್ಕೂ ದಿಕ್ಕುಗಳನ್ನು ನಮ್ಮ ಎದುರು ಬಾಗುವಂತೆ ಮಾಡೋಣ. ಪ್ರಭೋ! ನಿನ್ನ ಅಧ್ಯಕ್ಷತೆಯಲ್ಲಿ ನಾವು ಸಂಗ್ರಾಮಗಳಲ್ಲಿ ವಿಜಯಶಾಲಿಗಳಾಗಲಿ.

---

# ಯಶಸ್ವೀ ಜೀವನ

**ಯಶೋ ಮಾ ದ್ಯಾವಾ ಪೃಥಿವೀ ಯಶೋ ಮೇಂದ್ರ ಬೃಹಸ್ಪತೀ।**
**ಯಶೋ ಭಾಗಸ್ಯ ವಿಂದತು ಯಶೋ ಮಾ ಪ್ರತಿಮುಚ್ಯತಾಮ್।**
**ಯಶಸಾಸ್ಯಾಃ ಸಂಸದೋಽಹಂ ಪ್ರವದಿತಾ ಸ್ಯಾಂ॥**

(ಸಾಮವೇದ : ೬೧೧

ದ್ಯುಲೋಕ, ಭೂಲೋಕಗಳಲ್ಲಿ ನನಗೆ ಯಶಸ್ಸು ಪ್ರಾಪ್ತವಾಗಲಿ. ಸೂರ್ಯ ಚಂದ್ರರ ಯಶಸ್ಸುನನಗೆ ಪ್ರಾಪ್ತವಾಗಲಿ. ಐಶ್ವರ್ಯ, ಪ್ರಭುಭಕ್ತಿಗಳ ಯಶಸ್ಸುನನಗೆ ಲಭಿಸಲಿ. ಯಶಸ್ಸು ನನ್ನನ್ನೆಂದೂ ಬಿಡದಿರಲಿ. ಆ ಯಶಸ್ಸಿನಿಂದ ಯಶಸ್ವಿಯಾಗಿ ನಾನು ಈ ಮಾನವ ಸಮಾಜದ ಯಶಸ್ವೀ ಪ್ರವರ್ತಕ ನೆಂದೆನಿಸಲಿ.

**ಯಶಾ ಇಂದ್ರೋ ಯಶಾ ಅಗ್ನಿರ್ಯಶಾ ಸೋಮೋ ಅಜಾಯತ ।**
**ಯಶಾ ವಿಶ್ವಸ್ಯ ಭೂತಸ್ಯಾಹಮಸ್ಮಿ ಯಶಸ್ತಮಃ ॥**

(ಅಥರ್ವ : ೬–೩೯–೩)

ಸೂರ್ಯಚಂದ್ರ ಅಗ್ನಿಗಳೆಲ್ಲರೂ ಯಶಸ್ವಿಗಳಾಗಿದ್ದಾರೆ. ಅದೇ ರೀತಿಯಲ್ಲಿ ಯಶೋಽಭಿಲಾಷಿಯಾದ ನಾನು ಜಗತ್ತಿನ ಎಲ್ಲ ಪ್ರಾಣಿಗಳಿಗಿಂತ ಅಧಿಕ ಯಶಸ್ವಿಯೆಂದೆನಿಸಲಿ.

**ಯಥೇಂದ್ರೋ ದ್ಯಾವಾಪೃಥಿವ್ಯೋರ್ಯಶಸ್ವಾನ್ ಯಥಾಪ ಓಷಧೀಷು ಯಶಸ್ವತೀಃ**
**ಏವಾ ವಿಶ್ವೇಷು ದೇವೇಷು ವಯಂ ಸರ್ವೇಷು ಯಶಸಃ ಸ್ಯಾಮ ॥**

(ಅಥರ್ವ: ೬–೫೮–೨)

ಆಕಾಶ ಪೃಥ್ವಿಗಳ ನಡುವೆ ಸೂರ್ಯ ಯಶಸ್ವಿಯಾದ ಹಾಗೆ, ವನಸ್ಪತಿಗಳಲ್ಲಿ ಜೀವನ ಸಂಚಾರಗೊಂಡು ಜಲವು ಯಶಸ್ವಿಯಾದ ಹಾಗೆ ನಾವೂ ವಿದ್ವಾಂಸರಲ್ಲಿಯೂ, ಅನ್ಯರಲ್ಲಿಯೂ ಯಶಸ್ವಿಯೆಂದೆನಿಸಲಿ.

**ಯಶಾ ಯಾಸಿ ಪ್ರದಿಶೋ ದಿಶಶ್ಚ ಯಶಾಃ ಪಶೂನಾಮುತ ಚರ್ಷಣೀನಾಮ್ ।**
**ಯಶಾಃ ಪೃಥಿವ್ಯಾ ಅದಿತ್ಯಾ ಉಪಸ್ಥೇಽಹಂ ಭೂಯಾಸಂ ಸವಿತೇವ ಚಾರುಃ ॥**

(ಅಥರ್ವ : ೧೩–೧–೩೮)

ಸೂರ್ಯ! ನೀನು ನಾಲ್ಕು ಕಡೆಗಳಲ್ಲೂ, ಹತ್ತು ದಿಕ್ಕುಗಳಲ್ಲಿಯೂ ಸಂಚರಿಸುತ್ತಿರುವೆ. ಪಶುಮನುಷ್ಯರಲ್ಲಿ ನೀನು ಎಲ್ಲರಿಗಿಂತಲೂ ಅಧಿಕ ಯಶಸ್ವಿಯಾಗಿರುವೆ. ನಾನೂ ಈ ಸಮಸ್ತ ಭೂಮಂಡಲದಲ್ಲಿ ಸೂರ್ಯನಂತೆ ಪ್ರಕಾಶಮಾನನೂ ಯಶಸ್ವಿಯೂ ಆಗುವಂತೆ ಜೀವನ ಮಾಡುವಂತಾಗಲಿ.

**ಜಾತವೇದೋ ಯಶೋ ಅಸ್ಮಾಸು ಧೇಹಿ ।**

(ಋಗ್ವೇದ : ೫–೪–೧೧)

ಸಮಸ್ತ ಪ್ರಜೆಗಳನ್ನೂ ಅರಿತಿರುವ ಪರಮಾತ್ಮ! ನಮಗೆ ಯಶಸ್ಸನ್ನೂ ಕೀರ್ತಿಯನ್ನೂ ಕರುಣಿಸು.

**ಅಸ್ಮೇ ಧೇಹಿ ಶ್ರವೋ ಬೃಹದ್ ।**

(ಋಗ್ವೇದ: ೧-೯-೮)

**ಪ್ರಭೂ !** ನಮಗೆ ಮಹಾಯಶಸ್ಸನ್ನುಂಟು ಮಾಡು.

**ಯಶಃ ಶ್ರೀಃ ಶ್ರಯತಾಂ ಮಯಿ ಸ್ವಾಹಾ ॥**

(ಯಜುರ್ವೇದ : ೩೯–೪)

ನನ್ನಲ್ಲಿ ಯಶಸ್ಸೂ, ಐಶ್ವರ್ಯವೂ ಸದಾ ಸ್ಥಿರವಾಗಿರಲಿ. ನನ್ನ ಈ ಅಪೇಕ್ಷೆ ಪೂರ್ಣವಾಗಲಿ.

ಯಶಸ್ವಿಯೆನಿಸಲು, ಯಶಸ್ಸನ್ನು ಸಂಪಾದಿಸಲು ಎಂಥ ಉದಾತ್ತ ಭಾವನೆಗಳು ಇಲ್ಲಿವೆ. ವೇದಗಳನ್ನು ಬಿಟ್ಟರೆ ಉಳಿದ ಗ್ರಂಥಗಳಲ್ಲಿ ಈ ರೀತಿಯ ಉಚ್ಚ ಭಾವನೆಗಳು ಸಿಗಲಾರವು.

---

## ಮೀನಾಕ್ಷಿ ಪುರಂನಲ್ಲಿ ಆರ್ಯ ಮಹಾಸಮ್ಮೇಳನ

ಕಳೆದ ಡಿಸೆಂಬರ್ 31 ರಿಂದ ಜನವರಿ 2ನೆಯ ತಾರೀಕಿನ ವರೆಗೆ ತಮಿಳುನಾಡಿನ ಮೀನಾಕ್ಷಿಪುರಂನಲ್ಲಿ ಆರ್ಯಮಹಾಸಮ್ಮೇಳನವು ದೆಹಲಿಯ ಸಾರ್ವದೇಶಿಕ ಪ್ರತಿನಿಧಿ ಸಭೆ, ಹೈದರಾಬಾದ್ ಆರ್ಯ ಸಮಾಜ ಹಾಗೂ ಮದರಾಸಿನ ಸೆಂಟ್ರಲ್ ಆರ್ಯಸಮಾಜಗಳ ವತಿಯಿಂದ ಏರ್ಪಡಿಸಲ್ಪಟ್ಟಿತು. ಕರ್ನಾಟಕ ಪ್ರಾಂತೀಯ ಪ್ರತಿನಿಧಿ ಸಭೆಯ ವತಿಯಿಂದಲೂ ಸಾಕಷ್ಟು ಪ್ರಚಾರ ನಡೆದಿದ್ದಿತು. ಅದರ ವರದಿ ಹೀಗಿದೆ.

ಮೀನಾಕ್ಷಿಪುರಂ ತೆನ್‌ಕಾಶಿಯ ಸಮೀಪದಲ್ಲಿ ಇರುವ ಕೇವಲ 110 ಗುಡಿಸಲುಗಳುಳ್ಳ ಹಳ್ಳಿ. ಅಲ್ಲಿ ಹಿಂದೆ ಹರಿಜನರು ಇಸ್ಲಾಂಗೆ ಮತಾಂತರ ಹೊಂದಿ ಬಿಡಲಾಗಿ ಎಲ್ಲ ಹಿಂದೂ ಸಂಸ್ಥೆಗಳು ಕಣ್ಣುಬಿಡಬೇಕಾಯಿತು. ಅಲ್ಲಿನ ಮತಾಂತರಿತ ಹರಿಜನರನ್ನು ಮರಳಿ ಹಿಂದೂ ಧರ್ಮಕ್ಕೆ ಸ್ವೀಕರಿಸಲು ಆರ್ಯ ಸಮಾಜವು ಬಲು ಮುಖ್ಯವಾದ ಪಾತ್ರವನ್ನು ವಹಿಸತೊಡಗಿತು.

ಮೀನಾಕ್ಷಿಪುರಂಗೆ ಕೇವಲ ನಾಲ್ಕು ಕಿ. ಮೀಟರ್ ದೂರದಲ್ಲಿರುವ ಪನ್‌ಪೋಳ್ (ಪಣ್ ಪೋಳ್)ನಲ್ಲಿ ಮತ್ತು ಮೀನಾಕ್ಷಿಪುರಂನಲ್ಲಿ ಎರಡೂ ಕಡೆ ಸಮ್ಮೇಳನದ ವ್ಯವಸ್ಥೆಯಾಗಿದ್ದಿತು. ದೆಹಲಿ, ಹರಿಯಾಣ, ಪಂಜಾಬ್ ಉತ್ತರ ಪ್ರದೇಶ, ಹೈದರಾಬಾದ್ ಕಡೆಯಿಂದ ಬಂದಿದ್ದ ಸಹಸ್ರಾರು ಮಂದಿ ಆರ್ಯಕಾರ್ಯಕರ್ತರುಗಳಿಗೆ ಪಟ್ರಾಲಂನಲ್ಲಿರುವ ಕೇರಳ ಪ್ಯಾಲೆಸ್ ಗೆಸ್ಟ್‌ಹೌಸಿನಲ್ಲಿ ವ್ಯವಸ್ಥೆ ಮಾಡಲಾಗಿದ್ದಿತು. ಆರ್ಯಕಾರ್ಯಕರ್ತರ ಪೈಕಿ ಮಹಿಳೆಯರು. ಯುವತಿಯರು. ಹಸುಗೂಸುಗಳನ್ನೆತ್ತಿಕೊಂಡು ಉತ್ಸಾಹದಿಂದ ಭಾಗವಹಿಸಿದ್ದುದು ಅತ್ಯಂತ ಸ್ಫೂರ್ತಿದಾಯಕವಾಗಿದ್ದಿತು.

ಸುಮಾರು 6 ಸಾವಿರ ಮಂದಿ ಆರ್ಯಕಾರ್ಯಕರ್ತರು 10 ಬಸ್ಸುಗಳು ಅನೇಕ ವ್ಯಾನುಗಳು ಹಾಗೂ ಅಸಂಖ್ಯಾತವಾದ ಕಾರುಗಳಲ್ಲಿ ಆಗಮಿಸಿ "ಜಂಗಲಮೆ ಮಂಗಲ್" ಎಂಬಂತೆ ಶೋಭಾಯಾತ್ರೆಯನ್ನು ನಡೆಯಿಸಿದುದು ಒಂದು ವಿಶೇಷ ಘಟನೆ.

31–12–82ರ ಬೆಳಿಗ್ಗೆ 8 ಗಂಟೆಗೆ ವೈದಿಕ ಯಜ್ಞವು ನಡೆಯಿತು. ದೆಹರಾದೂನಿನ ತಪೋವನದ ಮಹಾತ್ಮಾ ದಯಾನಂದಜೀ ಮಹಾರಾಜರವರು ಬ್ರಹ್ಮನ ಸ್ಥಾನವನ್ನು

ವಹಿಸಿದ್ದರು. ಆಂಧ್ರಪ್ರದೇಶದ ಪಂಡಿತ ರುದ್ರ ದೇವಜೀ ಶಾಸ್ತ್ರಿಯವರು ಪೌರೋಹಿತ್ಯವಹಿಸಿದ್ದರು. 10ಗಂಟೆಗೆ ಸ್ವಾಮೀಜಿಯವರಿಂದ ಇಂಗ್ಲೀಷಿನಲ್ಲಿ ಅನುಗ್ರಹ ಭಾಷಣ ನಡೆಯಿತು. ಆ ದಿನ ಮಧ್ಯಾಹ್ನ ಪ್ರತಿನಿಧಿಗಳನ್ನು ಸ್ವಾಗತಿಸಲಾಯಿತು. ಸಾಯಂಕಾಲದಲ್ಲಿ ಮತ್ತೆ ಯಜ್ಞ ನಡೆಯಿತು. ರಾತ್ರಿಯಲ್ಲಿ ಭಜನೆ ಹಾಗೂ ಭಾಷಣಗಳು ನಡೆದವು.

1–1–1983ರಂದು ಪ್ರಾತಃ ಕಾಲ 8 ಗಂಟೆಗೆ ವೈದಿಕ ಯಜ್ಞದಲ್ಲಿ ಸುಮಾರು 200 ಮಂದಿ ಹರಿಜನರಿಗೆ ಹೋಮದ ಮೂಲಕ ಯಜ್ಞೋಪವೀತ ಧಾರಣೆ ಮಾಡಿಸಲಾಯಿತು. ಮಧ್ಯಾಹ್ನ 2ಗಂಟೆಗೆ ಶೋಭಾ ಯಾತ್ರೆ ನಡೆಯಿಸಲಾಯಿತು. ಪನ್‌ಪೋಳ್‌ನಿಂದ ಮೀನಾಕ್ಷಿಪುರಂಗೂ ಮತ್ತು ಹಿಂದಕ್ಕೂ ಮೆರವಣಿಗೆ ಹೊರಟಿತು. 4 ಗಂಟೆಗೆ ಶ್ರೀ ಮುಲ್ಕರಾಜ ಭಲ್ಲ ಎಂಬ ದಾನಿಗಳು ಮೀನಾಕ್ಷಿಪುರಂನಲ್ಲಿ ಸಾರ್ವದೇಶಿಕ ಸಭೆಗಾಗಿ 1ಎಕರೆ ಜಾಗವನ್ನು ಕೊಂಡು ಕೊಟ್ಟಿರುವ ಸ್ಥಳದಲ್ಲಿ "ಮಹರ್ಷಿ ದಯಾನಂದ ಚಿರಂಜೀಲಾಲ್ ವಿದ್ಯಾ ಮಂದಿರ ಮತ್ತು ಯಜ್ಞ ಶಾಲೆ"ಯ ಶಂಕು ಸ್ಥಾಪನೆಯನ್ನು ದೆಹಲಿಯ ಸಾರ್ವದೇಶಿಕ ಸಭೆಯ ಅಧ್ಯಕ್ಷರಾದ ಶ್ರೀ ರಾಮಗೋಪಾಲ ಶಾಲವಾಲೆಯವರು ನೆರವೇರಿಸಿದರು. ಸಂಜೆ 5ಗಂಟೆಗೆ ವೈದಿಕ ಮಹಾಯಜ್ಞ ನಡೆಯಿತು.

1ನೆಯ ತಾರೀಖು ರಾತ್ರಿ ಶ್ರೀ ಡಾ|| ಅಮರೇಶ ಆರ್ಯ ಮತ್ತು ಜಯಪ್ರಕಾಶ ಆರ್ಯರವರಿಂದ ಭಾಷಣಗಳು ನಡೆದವು. ಅಮರೇಶ ಆರ್ಯರವರು ಎರಡು ತಿಂಗಳು ಮುಂಚಿತವಾಗಿಯೇ ಮೀನಾಕ್ಷಿಪುರಂನಲ್ಲಿ ಬಿಡಾರ ಹೂಡಿ ಅಲ್ಲಿನ ವ್ಯವಸ್ಥೆಯನ್ನೆಲ್ಲ ನೋಡಿ ಕೊಳ್ಳುತ್ತಿದ್ದರು. 1–1–1983 ರ ಸಂಜೆ ತಮಿಳುನಾಡಿನ ವಿಧಾನಸಭೆಯ ಸ್ಪೀಕರ್‌ರಾದ ಶ್ರೀ ಎಸ್. ಚೆಲ್ಲಪಂಡಿಯನ್ ಮಾತನಾಡಿ ಈ ವಿಷಯದಲ್ಲಿ ಮಠಾಧಿಪತಿಗಳು ಸಮಯೋಚಿತ ಪ್ರತಿಕ್ರಿಯೆಯನ್ನು ಸೂಚಿಸದೆ, ನಿಷ್ಕ್ರಿಯರಾಗಿರುವುದನ್ನು ಖಂಡಿಸಿದರು. ಸಮತ್ವ, ಸಗೋತ್ರತ್ವ ಸಂಗಮ (sss) ಎಂಬ ಸಂಸ್ಥೆಯ ಮೂಲಕ ಮುಸ್ಲಿಂ ಸಂಸ್ಥೆಗಳು ಪುಲಿಯಂಗುಡಿ ಎಂಬಲ್ಲಿ ದಂಗೆ ಎಬ್ಬಿಸಿ, ಹಿಂದೂಗಳನ್ನು ಕೊಲ್ಲಿಸಿದರೆಂದು ಆರೋಪಿಸಿದರು. ಮಾಜೀ ಪಾರ್ಲಿಮೆಂಟ್ ಸದಸ್ಯರೂ ಹರಿಜನ ಮುಖಂಡರೂ ಆದ ಶ್ರೀ ಆರ್. ಎಸ್. ಆರುಮುಗಂ ಭಾಷಣ ಮಾಡಿದರು. ಆರ್ ಎಸ್ಸೆಸ್‌ನ ಆಂಧ್ರದ ನೇತಾರರಾದ ಶ್ರೀ ಸೂರ್ಯ ನಾರಾಯಣರಾಯರು ಎಲ್ಲ ಹಿಂದೂಗಳನ್ನೂ ಎಚ್ಚರಿಸಿ ಮಾತಾಡಿದರು. ಇತರರು ಶ್ರೀಮತಿ ವಿಜಯ ಗೋಮತಿನಾಯಗಂ, ಶಂಕರ ಪಂಡಿಯನ್ ಪಿಳ್ಳೈ, ಮುಂತಾದವರು ಸಮಯೋಚಿತವಾದ ಮಾತುಗಳನ್ನಾಡಿದರು.

2ನೆಯ ತಾರೀಖು ಆರ್ಯಸಮಾಜದ ಚರಿತ್ರೆಯಲ್ಲಿ ಬರೆದಿಡಬೇಕಾದ ದಿನ, ಪ್ರಾತಃಕಾಲ 8ಗಂಟೆಗೆ ಸಾಮೂಹಿಕ ಯಜ್ಞವು ನಡೆಯಿತು. ಮೂರು ಮತಾಂತರಿತ ಹರಿಜನ ಕುಟುಂಬಗಳನ್ನು ಶುದ್ಧಿಮಾಡಿ ಯಜ್ಞೋಪವೀತ ಧಾರಣೆ ಮಾಡಿಸಿ ಮರಳಿ ಹಿಂದೂ ಧರ್ಮಕ್ಕೆ ಸ್ವೀಕರಿಸಲಾಯಿತು. ಅವರ ಇಸ್ಲಾಮೀ ಹೆಸರುಗಳನ್ನು ತೆಗೆದು ಹಾಕಿ ಅವರ ಹಳೆಯ ಹಿಂದೂ ಹೆಸರುಗಳನ್ನೇ ಅವರಿಗೆ ಇಡಲಾಯಿತು.

2–1–1983ರ ಮಧ್ಯಾಹ್ನ 2 ಗಂಟೆಗೆ ತೆರೆದ ಅಧಿವೇಶನದಲ್ಲಿ ಶ್ರೀ ರಾಮಗೋಪಾಲ್

ಶಾಲವಾಲೆಯವರು ಇಂಗ್ಲೀಷಿನಲ್ಲಿ ಅಚ್ಚು ಹಾಕಿಸಿದ್ದ ಭಾಷಣವನ್ನು ಓದಿದರು. ಅದರ ತಮಿಳು ಅನುವಾದವನ್ನೂ ಅಚ್ಚು ಹಾಕಿಸಲಾಗಿದ್ದಿತು.

ತದನಂತರ ಆಂಧ್ರದ ನೇತಾರರಾಗಿದ್ದ ವಂದೇ ಮಾತರಂ ರಾಮಚಂದ್ರರಾವ್‌ರವರು ಭಾಷಣ ಮಾಡಿದರು. ಸ್ವಾಗತಾಧ್ಯಕ್ಷರಾದ ತಮಿಳುನಾಡಿನ ಶ್ರೀ ಅನಂತ ರಾಮಶೇಷನ್‌ರವರು ಎಲ್ಲರನ್ನೂ ಸ್ವಾಗತಿಸಿದರು. ಆದಿನದ ಪ್ರೀತಿ ಭೋಜನದಲ್ಲಿ ಹರಿಜನರೂ ಅವರ ವಿರೋಧಿಗಳಾದ ತೇವರ್ (ಈಡಿಗ) ಜನಾಂಗದವರೂ ಮತ್ತು ಬಹಳಷ್ಟು ಮುಸಲ್ಮಾನರೂ ಕೂಡ ಭಾಗ ವಹಿಸಿದ್ದರು. ಇನ್ನುಮುಂದೆ ಯಾವ ಜಗಳ ಹಿಂಸಾಚಾರಗಳೂ ನಡೆಯದಂತೆ ಶ್ರೀ ಶಾಲ್‌ವಾಲೆಯವರು ತೇವರ್ ಜನಾಂಗದವರಿಗೂ ಹರಿಜನರಿಗೂ ರಾಜಿ ಮಾಡಿದರು. ಅಲ್ಲಿ ಸುಮಾರು 500 ಮಂದಿ ಪೋಲೀಸಿನವರ ಬಂದೋಬಸ್ತಾದ ಪಹರೆಯಿದ್ದಿತು. ಸಾಮೂಹಿಕ ಭೋಜನ ಕೂಟದಲ್ಲಿ ಆರೆಸ್ಸೆಸ್ ನವರು ಚೂಟಿಯಾಗಿ ಬಡಿಸುವ ಕೆಲಸವನ್ನು ವಹಿಸಿಕೊಂಡಿದ್ದರು. ಒಬ್ಬ ತಮಿಳು ಶೈವ ಸನ್ಯಾಸಿಗಳು ಈ ಕಾರ್ಯಕ್ರಮವನ್ನು ಮೆಚ್ಚಿಕೊಂಡು 2,000/ ರೂ, ಗಳನ್ನು ದಾನನೀಡಿದರು.

ಒಟ್ಟಿನಲ್ಲಿ ಕಂಗ್ರಾಮವಾದ ಮೀನಾಕ್ಷಿಪುರಂ ಆರ್ಯಸಮಾಜದ ಇತಿಹಾಸದಲ್ಲಿ ಅಗ್ರಸ್ಥಾನ ಪಡೆಯಿತು. ಅಂತೆಯೆ ದಕ್ಷಿಣಭಾರತದಲ್ಲಿ ಆರ್ಯಸಮಾಜದ ಧರ್ಮರಕ್ಷಾ ಮಹಾಭಿಯಾನದಲ್ಲಿ ಈ ಮತಾಂತರ ವಿರೋಧದ ಚಳುವಳಿಯು ಅತ್ಯಂತ ಮಹತ್ವಪೂರ್ಣವಾದುದು.

ಪ್ರತ್ಯಕ್ಷದರ್ಶಿ
**ಸಿ. ಶ್ರೀ ಕಂಠಯ್ಯ**
ದೇವರಾಜ ಮೊಹಲ್ಲಾ ಆರ್ಯಸಮಾಜ,
ಮೈಸೂರು.

---

## ವೇದಗಳ ಸಂದೇಶವನ್ನು ಮನೆಮನೆಗೆ ತಲುಪಿಸಲು ಕರೆ
## ಇಸ್ಲಾಮೀ ಮತ್ತು ಕ್ರೈಸ್ತರ ದುರಾಕ್ರಮಣವನ್ನು ವಿಫಲಗೊಳಿಸಲು ದೃಢ ಸಂಕಲ್ಪ

ತಮಿಳುನಾಡಿನ ಮೀನಾಕ್ಷಿಪುರಂನಲ್ಲಿ ದಿನಾಂಕ 31 ಡಿಸೆಂಬರ್ ಮತ್ತು ಜನವರಿ 1, 2-1983 ಏರ್ಪಡಿಸಲಾಗಿದ್ದ ಬೃಹತ್ ಆರ್ಯ ಮಹಾ ಸಮ್ಮೇಳನದ ಅಧ್ಯಕ್ಷ ಸ್ಥಾನದಿಂದ ಮಾತನಾಡಿದ ಸಾರ್ವದೇಶಿಕ ಆರ್ಯ ಪ್ರತಿನಿಧಿ ಸಭೆಯ ಅಧ್ಯಕ್ಷರಾದ ಶ್ರೀ ರಾಮಗೋಪಾಲ ಶಾಲವಾಲೆಯವರು ಮಾಡಿದ ಭಾಷಣದ ಸಾರಾಂಶ ಇಂತಿದೆ :-

ಪೂಜ್ಯ ಸ್ವಾಮೀಜಿಯವರೇ, ಶ್ರದ್ಧೇಯ ಮಾತೆಯವರೇ, ಆದರಣೀಯ ಸಹೋದರಿಯರೇ ಹಾಗೂ ನೆಚ್ಚಿನ ಆರ್ಯಬಂಧುಗಳೇ !

ಮೀನಾಕ್ಷಿ ಪುರಂನಲ್ಲಿ ನಡೆಯುತ್ತಿರುವ ಈ ಐತಿಹಾಸಿಕ ಆರ್ಯಮಹಾಸಮ್ಮೇಳನ ದಲ್ಲಿ ಭಾಗಿಯಾದ ತಮಗೆ ನನ್ನ ಹಾರ್ದಿಕ ಕೃತಜ್ಞತೆಗಳನ್ನು ಸಮರ್ಪಿಸುತ್ತೇನೆ. ದೇಶ, ಜನಾಂಗ ಹಾಗೂ ಧರ್ಮಗಳ ಮೇಲೆ ನಾಲ್ಕು ಕಡೆಗಳಿಂದ ಸಂಕಟಗಳ ಮೋಡಗಳು ಆವರಿಸಿ ರುವ ಈ ದುರ್ಭರ ಸಮಯದಲ್ಲಿ ಈ ಸಮ್ಮೇಳನವು ಭಾರತೀಯರಿಗೆ ಉತ್ತಮ ರೀತಿಯ ಮಾರ್ಗದರ್ಶನ ನೀಡಬಲ್ಲದೆಂದು ತಿಳಿದಿದ್ದೇನೆ.

ಮೀನಾಕ್ಷಿಪುರಂ ಒಂದು ಪುಟ್ಟ ಗ್ರಾಮ. ಒಂದೂವರೆ ವರ್ಷಗಳಿಗೆ ಮುನ್ನ ತಮಿಳು ನಾಡಿನಿಂದ ಹೊರಗಿನವರಿಗಾರಿಗೂ ತಿಳಿಯದ ಗ್ರಾಮವಿದು. ಆದರೆ ಆದಿಯಿಂದಲೂ ವಂಶಾ ನುಗತವಾಗಿ ಹಿಂದೂ ಸಂಸ್ಕೃತಿಯಲ್ಲಿ ಅಗಾಧ ಶ್ರದ್ಧೆಯನ್ನಿರಿಸಿಕೊಂಡು ಬಾಳುತ್ತಾ ಬಂದಿದ್ದ ಮುಗ್ಧ ಗ್ರಾಮೀಣ ಜನರನ್ನು ತನ್ನ ಪೆಟ್ರೋಡಾಲರ್‌ಗಳ ಶಕ್ತಿಯಿಂದ ಇಸ್ಲಾಮಿನತ್ತ ಎಳೆ ದೊಯ್ಯುವ ಕುಟಿಲ ಷಡ್ಯಂತ್ರವನ್ನು ನಮ್ಮ ದೇಶದ ಹಾಗೂ ವಿದೇಶಗಳ ಕೆಲವು ಮತಾಂಧರು ಕೈಗೊಂಡರು. ಇದರಿಂದಾಗಿ ಮೀನಾಕ್ಷಿಪುರಂ ಭಾರತದಲ್ಲೇ ಅಲ್ಲ, ವಿಶ್ವವಿಖ್ಯಾತವಾಯಿತು. ಆದರೆ ಈ ದುರ್ಘಟನೆಯತ್ತ ಜನರ ಗಮನವನ್ನು ಸೆಳೆದು ಅವರ ಕುಟಿಲತೆಯನ್ನು ತಡೆ ಗಟ್ಟಲು ಮೊಟ್ಟಮೊದಲು ಮುನ್ನುಗ್ಗಿದ ಸಂಸ್ಥೆ ಆರ್ಯಸಮಾಜ. ಇದರಿಂದಾಗಿ ಹಿಂದೂ ಸಮಾಜದಲ್ಲಿ ಒಂದು ನವಚೈತನ್ಯ ಹಾಗೂ ಉತ್ಸಾಹದ ಸಂಚಾರವಾಯಿತು.

ಈ ಪುನೀತ ಸಂದರ್ಭದಲ್ಲಿ ನಾನು ಸಾರ್ವದೇಶಿಕ ಆರ್ಯ ಪ್ರತಿನಿಧಿ ಸಭೆಯ ವರಿಷ್ಠ ಉಪಾಧ್ಯಕ್ಷರಾದ ಶ್ರೀ ವಂದೇ ಮಾತರಂ ರಾಮಚಂದ್ರ ರಾವ್, ಮೀನಾಕ್ಷಿಪುರಂ ಆರ್ಯ ಸಮಾಜದ ಉತ್ಸಾಹೀ, ನವಯುವಕ ಅಧ್ಯಕ್ಷರಾದ ಶ್ರೀ ಅನಂತರಾಮ ಶೇಷನ್ ಹಾಗೂ ಇನ್ನಿತರ ಅಸಂಖ್ಯಾತ ಯುವಕ ಕಾರ್ಯಕರ್ತರೆಲ್ಲರಿಗೂ ಧನ್ಯವಾದಗಳನ್ನರ್ಪಿಸುವುದು ನನ್ನ ಪವಿತ್ರ ಕರ್ತವ್ಯವೆಂದೆಣಿಸುತ್ತೇನೆ. ಈ ಎಲ್ಲರ ನಿಸ್ವಾರ್ಥ, ಅನವರತ ಪರಿಶ್ರಮವಿಲ್ಲದಿದ್ದರೆ ನಾವು ಈ ಸಮ್ಮೇಳನವನ್ನು ಸಫಲಗೊಳಿಸಲು ಸಾಧ್ಯವಾಗುತ್ತಿರಲಿಲ್ಲ.

ಕಳೆದ ೧೯೮೧ರ ಫೆಬ್ರವರೀ ತಿಂಗಳಲ್ಲಿ ವಿದೇಶ ಧನದ ಬಲದಿಂದ ಇಲ್ಲಿಗೆ ಬಂದ ೭೦೦ ಜನ ದೇಶೀ ಹಾಗೂ ವಿದೇಶಿ ಮುಸಲ್ಮಾನರು ಈ ಗ್ರಾಮದ ಅತ್ಯಂತ ನಿರ್ಧನ ಹರಿಜನರನ್ನು ಬಲಾತ್ಕಾರದಿಂದ ಮತಾಂತರ ಗೊಳಿಸಿ ಹಿಂದೂ ಸಮಾಜದಲ್ಲಿ ಕೋಲಾಹಲವನ್ನೆಬ್ಬಿಸಿದರು. ಈ ಒಂದು ದುರ್ಘಟನೆಯು ರಾಷ್ಟ್ರದ ಎಲ್ಲಾ ಬುದ್ಧಿ ಜೀವಿ, ಧರ್ಮ ಪರಾಯಣ ದೇಶಭಕ್ತ ವ್ಯಕ್ತಿ ಹಾಗೂ ಸಂಘಟನೆಗಳವರನ್ನು ತಳಮಳಗೊಳಿಸಿತು. ಪೆಟ್ರೋ ಡಾಲರ್‌ಗಳ ಶಕ್ತಿಯಿಂದ ಮತಾಂತರ ಮಾಡಿಸಿ, ವಿದೇಶೀ ಸೂಚನೆಗಳಿಗನುಸಾರ ನಡೆಯುವ ತಥಾಕಥಿಕ ಅಲ್ಪ ಸಂಖ್ಯಾತ ಮುಸ್ಲಿಮರನೇಕರು ಭಾರತದಲ್ಲಿ ರಾಜಕೀಯ ಸೂತ್ರಗಳನ್ನು ತಮ್ಮ ಕೈಗೆ ತೆಗೆದುಕೊಳ್ಳುವ ಸನ್ನಾಹದಿಂದ ಈ ಕಾರ್ಯಕ್ಕೆ ಕೈ ಹಾಕಿದರು. ರಾಜ್ಯ ಸೂತ್ರಗಳನ್ನು ತಮ್ಮ ಕೈಗೆ ತೆಗೆದು ಕೊಳ್ಳುವ ಸ್ವಪ್ನದೊಂದಿಗೆ, ೧೪ ಕೋಟಿ ಹರಿಜನರನ್ನು ಮುಸಲ್ಮಾನರನ್ನಾಗಿಸಿ ಬಹು ಸಂಖ್ಯಾತರಾಗಿರುವ ಹಿಂದುಗಳನ್ನು ಅಲ್ಪ ಸಂಖ್ಯಾತರನ್ನಾಗಿಸುವ ಹವಣಿಕೆಯೂ ಇವರ ದಾಗಿತ್ತು.

ಸಾರ್ವದೇಶಿಕ ಆರ್ಯ ಪ್ರತಿನಿಧಿ ಸಭೆಯ ಮುಖಂಡರಿಗೆ ಕುವೈತ್‌ನಿಂದ ಪ್ರಕಟವಾಗುವ 'ಅರಬ್ ಟೈಂಸ್' ಪತ್ರಿಕೆಯ ಜನವರಿ ೧೯, ೧೯೮೧ರ ಪ್ರತಿಗಳು ದೃಷ್ಟಿಗೆ ಬಿದ್ದು ಅವರಿಗೆ ಮುಸ್ಲಿಮರ ಷಡ್ಯಂತ್ರಗಳ ಸ್ಪಷ್ಟ ಚಿತ್ರಣ ಲಭ್ಯವಾಯಿತು. ಇದರಲ್ಲಿ 'ಇಸ್ಲಾಮಿಕ್ ಕಲ್ಚರಲ್ ಸೆಂಟರ್' — ಲಂಡನ್ — ಇದರ ಡೈರೆಕ್ಟರ್ ಆದ ಮುಹಮ್ಮದ್ ಅಬ್ದುಲ್‌ಖರೇ ಬದಬುಯಿಯ ಈ ಆಶಯವನ್ನು ಮುದ್ರಿಸಲಾಗಿತ್ತು — "ಭಾರತೀಯ ಹರಿಜನರನ್ನು ಇಸ್ಲಾಮಿಗೆ ಮತಾಂತರಿಸಿ ಭಾರತದ ಮುಸಲ್ಮಾನರ ಸಂಖ್ಯೆಯನ್ನು ೨೦ಕೋಟಿ ಮಾಡಲು ಇದು ಸುವರ್ಣ ಸಂಧಿ."

ವಸ್ತುತ: ಈ ಯೋಜನೆಯು ೧೯೭೩ರಲ್ಲಿ ನಡೆದ 'ಪ್ಯಾನ್ ಇಸ್ಲಾಮಿಕ್ ಫೆಡರೇಶನ್ ಅಧಿವೇಶನದಲ್ಲಿ ಪ್ರಾರಂಭವಾಯಿತು. ಇದರಲ್ಲಿ ಮೊರಾಕ್ಕೋನಿಂದ ಮಲೇಶಿಯಾವರೆಗೆ ಹಬ್ಬಿರುವ ಎಲ್ಲಾ ಮುಸ್ಲಿಂ ರಾಷ್ಟ್ರಗಳೂ ಪಾಲ್ಗೊಂಡಿದ್ದವು. ಆ ಅಧಿವೇಶನದಲ್ಲಿ ೫೦೦೦ ಕೋಟಿ ರೂಪಾಯಿಗಳು ಈ ಉದ್ದೇಶ್ಯಕ್ಕಾಗಿಯೇ ಮಂಜೂರಾಗಿತ್ತು.

ಈ ಸಂಬಂಧದಲ್ಲಿ, ದೇಶದ ಹರಿಜನ ಬಂಧುಗಳನ್ನು ಅರ್ಧಾರ್ಧ ಹಂಚಿಕೊಳ್ಳುವ 'ಸೂಚನೆ'ಯಿತ್ತಿದ್ದ ಅಲೀ ಬಂಧುಗಳ ಪಿತೂರಿ ನಮಗೆ ನೆನಪಾಗುತ್ತದೆ. ಆ ಸಮಯದಲ್ಲಿ ನಮ್ಮ ಪುಣ್ಯವೆಂಬಂತೆ ಮಹಾನ್ ಆರ್ಯನೇತಾರರಾದ ಸ್ವಾಮೀ ಶ್ರದ್ಧಾನಂದ, ಲಾಲಾ ಲಜಪತರಾಯರೂ ಮತ್ತು ಶ್ರೀ ಮದನ ಮೋಹನ ಮಾಳವೀಯರ ಪ್ರಬಲ ವಿರೋಧದಿಂದ ಅಲೀ ಬಂಧುಗಳ ಹಂಚಿಕೆ ವಿಫಲಗೊಂಡಿತ್ತು. ೧೯೩೭ ರಷ್ಟು ಪೂರ್ವದಲ್ಲಿಯೇ ಈಜಿಪ್ಟ್‌ದಲ್ಲಿಯೂ ಭಾರತದ ದೀನ–ದಲಿತರನ್ನು ಮುಸಲ್ಮಾನರನ್ನಾಗಿಸುವ ಯೋಜನೆ ರೂಪಗೊಂಡಿತ್ತು. ಇಂದಿನ ಸಂಕಟಗಳ ಭೂಮಿಕೆಗಳಾವುವು – ಎಂಬುದರ ಬಗ್ಗೆ ಇವನ್ನೆಲ್ಲಾ ತಮ್ಮ ಮುಂದಿಡುತ್ತಿದ್ದೇನೆ.

ಈ ಯೋಜನೆಯನ್ನು ಕಾರ್ಯಗತಗೊಳಿಸಲು ಕೈರೋನಗರ ಅಲ್‌ಅಜಹರ್ ಇಸ್ಲಾಮೀ ವಿಶ್ವವಿದ್ಯಾನಿಲಯದ ರೆಕ್ಟರ್ ಅಗಿಶೇಖ್ ಅಲಮ್ ಭಾರತದ ಹರಿಜನರನ್ನು ಇಸ್ಲಾಮಿಗೆ ಸೇರಿಸಲು ಒಂದು ಪ್ರಚಾರಕರ ತಂಡ (ಮಿಶನ್‌ವನ್ನೂ ೨೫ಸಾವಿರ ಪೌಂಡ್‌ಗಳನ್ನು ಒಟ್ಟುಗೂಡಿಸಿ ಭಾರತಕ್ಕೆ ಕಳುಹಿಸುವ ಸನ್ನಾಹ ನಡೆಸಿದ್ದರು. ಇಷ್ಟೇ ಅಲ್ಲದೆ, ಭಾರತದ ಮುಸ್ಲಿಂ ನಾಯಕರಿಗೆ ಪತ್ರ ಬರೆದು ಈ ಸುವರ್ಣಾವಕಾಶವನ್ನು ಪೂರ್ಣವಾಗಿ ಉಪಯೋಗಿಸಿಕೊಳ್ಳುವಂತೆ ಹಾಗೂ ಅಸ್ಪೃಶ್ಯರನ್ನು ಮುಸಲ್ಮಾನರನ್ನಾಗಿಸಲು ಕರೆಕೊಟ್ಟಿದ್ದರು. ಮಾತ್ರವಲ್ಲ. ಇನ್ನೂ ಎಷ್ಟು ಜನ ಮಿಶನರಿಗಳನ್ನು ಕಳುಹಿಸಬೇಕೆಂದೂ ಕೇಳಿದ್ದರು. ಈ ಪತ್ರಕ್ಕೆ ಉತ್ತರವನ್ನು 'ಅಂಜುಮಾನೆ ಇಸ್ಲಾಂ'ನ ಅಧ್ಯಕ್ಷರು ನೀಡಿ, ಅಧಿಕಾಂಶ ಅಸ್ಪೃಶ್ಯರು ದಕ್ಷಿಣಭಾರತದಲ್ಲಿದ್ದಾರೆಂದೂ ತಿಳಿಸಿದ್ದರು.

ಈ ಯೋಜನೆಗನುಸಾರ ಮುಸಲ್ಮಾನ ಮುಖಂಡರು ದಕ್ಷಿಣಭಾರತದಲ್ಲಿ ಮತಾಂತರದ ಬಗ್ಗೆ ಪಿತೂರಿ ನಡೆಸಿದರು. ದಕ್ಷಿಣಭಾರತದಲ್ಲಿ ಮತಾಂತರದಲ್ಲಿ ಪ್ರತ್ಯಕ್ಷ ಹಾಗೂ ಪರೋಕ್ಷ

ವಾಗಿ ಹಸ್ತಕ್ಷೇಪ ನಡೆಸಿದ ಮುಸ್ಲಿಂ ನಾಯಕರೇ ಅಲ್ಪಸಂಖ್ಯಾತರ ಹಿತವನ್ನು ಸಂರಕ್ಷಿಸ ಬೇಕೆಂಬ ಕೂಗೆಬ್ಬಿಸಿ ಕೇಂದ್ರ ಸರಕಾರವನ್ನು ಗೊಂದಲಕ್ಕೀಡು ಮಾಡುತ್ತಿದ್ದಾರೆ. ಇತ್ತೀಚೆಗೆ ಲೋಕಸಭೆ, ರಾಜ್ಯಸಭೆಗಳ ೪೫ ಮುಸ್ಲಿಂ ಸದಸ್ಯರುಗಳು ಪ್ರಧಾನ ಮಂತ್ರಿಗಳಿಗೆ ಸಲ್ಲಿಸಿದ ಮನವಿಯೂ ಸಹ ಮುಂಬರಲಿರುವ ಅಪಾಯದ ಮುನ್ಸೂಚನೆಯಾಗಿದೆ. ಈ ಮುಸ್ಲಿಂ ಮುಖಂಡರು ಯಾವುದೇ ರಾಜಕೀಯ ಪಕ್ಷಕ್ಕೆ ಸೇರಿರಲೊಲ್ಲರೇಕೆ ?— ಅವರೆಲ್ಲರೂ ಇಸ್ಲಾ ಮೀಕರಣ ಪ್ರಚಾರದಲ್ಲಿ ಏಕ ಮತ ಹೊಂದಿದವರಾಗಿದ್ದಾರೆ. ಈ ಉದ್ದೇಶವನ್ನು ಕೈಗೂಡಿ ಸಲು ಅವರು ದೃಢವಾದ ವೇದಿಕೆಯನ್ನು ನಿರ್ಮಿಸಲು ಪ್ರಯತ್ನಿಸಿದ್ದಾರೆ. ದಿಲ್ಲಿ ಜಾಮಾ ಮಸೀದಿಯ ಇಮಾಂ ಅಬ್ದುಲ್ಲಾ ಬುಖಾರಿ ಪಾಕಿಸ್ತಾನದೊಂದಿಗೆ ಸಂಬಂಧ ಹೊಂದಿದ್ದು, ಅಲ್ಪ ಸಂಖ್ಯಾತರೆಂದು ಹೇಳಲಾಗುತ್ತಿರುವ ಅಕಾಲಿ ಸಿಖ್ಖರು ಹಾಗೂ ಅಂತಹ ವಿಚಾರಧಾರೆಯ ಇನ್ನಿತರ ವರ್ಗದ ಬೆಂಬಲದೊಂದಿಗೆ ರಾಷ್ಟ್ರೀಯ ಐಕ್ಯತೆಯನ್ನೂ, ಜಾತ್ಯಾತೀತ ಧೋರಣೆಯ ಸರಕಾರವನ್ನೂ ಭಗ್ನಗೊಳಿಸಿ ತಮ್ಮ ಕಾರ್ಯ ಸಾಧಿಸಿಕೊಳ್ಳುವತ್ತ ಪ್ರಯತ್ನ ಶೀಲರಾಗಿರು ವುದು ಗೋಚರವಾಗುತ್ತಿದೆ.

ಈ ಎಲ್ಲಾ ವಿಷಯಗಳು ಗೊತ್ತಿದ್ದರೂ ನಮ್ಮ ಸರಕಾರ ಕಣ್ಣುಗಳನ್ನು ಮುಚ್ಚಿ ಕುಳಿತಿ ರುವುದು ಖೇದಕರ. ಯಾರು ಕೇಂದ್ರವನ್ನು ದುರ್ಬಲಗೊಳಿಸುವುದರಲ್ಲಿ ನಿರತರಾಗಿದ್ದಾರೋ ಅವರತ್ತಲೇ ಬಾಗುತ್ತಿದ್ದಾರೆ. ಕೇಂದ್ರವನ್ನು ಬಲಗೊಳಿಸಿ ರಾಷ್ಟ್ರೀಯ ಐಕ್ಯತೆಯನ್ನು ಸಾಧಿಸ ಬಯಸುವ ಆರ್ಯಸಮಾಜದ ಮಾತುಗಳತ್ತ ಸರಕಾರ ಕಿವಿಗೊಡುತ್ತಿಲ್ಲ.

ಈ ಪುನೀತ ಸಂದರ್ಭದಲ್ಲಿ ಆರ್ಯ ಜಗತ್ತಿಗೆ ಸಮುಚಿತ ಮಾರ್ಗದರ್ಶನ ಮಾಡು ವುದು ನನ್ನ ಧಾರ್ಮಿಕ ಹಾಗೂ ನೈತಿಕ ಕರ್ತವ್ಯವಾಗಿದೆ. ಆರ್ಯಸಮಾಜದ ವಿಶಾಲ ಸಂಘಟ ನೆಯು ಖಂಡಿತವಾಗಿಯೂ ತನ್ನ ಕರ್ತವ್ಯ ಪಾಲನೆ ಮಾಡುತ್ತದೆ. ಇದರೊಂದಿಗೆ ಹಿಂದೂ ಸಮಾಜದ ಘಟಕಗಳಿಗೆ ಸೇರಿದ ಸನಾತನ ಧರ್ಮೀಯರು, ಜೈನರು, ಬೌದ್ಧರು ರಾಷ್ಟ್ರೀಯ ಏಕತೆಯಲ್ಲಿ ನಂಬಿಕೆ, ಶ್ರದ್ಧೆಗಳನ್ನಿಟ್ಟಿರುವ ಸಿಖ್ ಬಂಧುಗಳೂ ಸಹ ಆರ್ಯಸಮಾಜದ **"ಧರ್ಮರಕ್ಷಾ ಮಹಾಭಿಯಾನ"**ದ ಮಹಾನ್ ಆಂದೋಳನವನ್ನು ಯಶಸ್ವಿಗೊಳಿಸಲು ಪೂರ್ಣ ಸಹಕಾರ ನೀಡುವರೆಂದು ಆಶಿಸುತ್ತೇನೆ.

ದೇಶದ ಪೂರ್ವಾಂಚಲದ ಮೇಘಾಲಯ, ನಾಗಾಲ್ಯಾಂಡ್, ಮಿಜೋರಮ್, ಅರುಣಾ ಚಲ ಪ್ರದೇಶಗಳಲ್ಲಿ ಕ್ರೈಸ್ತ ಮಿಶನರಿಗಳು ವಿದೇಶೀ ಹಣದ ಬಲದಿಂದ ಭಾರತೀಯ ಸಂಸ್ಕೃತಿ ಹಾಗೂ ರಾಷ್ಟ್ರದ ಸತ್ವವನ್ನು ದುರ್ಬಲಗೊಳಿಸಲು ವಿದೇಶೀ ಶಕ್ತಿಗಳ ಕುಟಿಲ ತಂತ್ರಗಳನ್ನು ಕಾರ್ಯಗತಗೊಳಿಸಲು ಪ್ರಯತ್ನಿಸುತ್ತಿದ್ದಾರೆ. ಈ ಸ್ಥಾನಗಳಲ್ಲಿ 'ದಯಾನಂದ ಸೇವಾ ಶ್ರಮಗಳನ್ನು ತೆರೆದು, ಆರ್ಯ ಸಮಾಜವು ಅವರ ಕುಟಿಲ ತಂತ್ರವನ್ನು ವಿಫಲಗೊಳಿಸಲು ಶ್ರಮಿಸುತ್ತಿದೆ. ನನ್ನ ದೇಶದ ಎಲ್ಲಾ ದೇಶ ಪ್ರೇಮೀ ಜನಗಳನ್ನು ಹಾಗೂ ಎಲ್ಲಾ ಧಾರ್ಮಿಕ ಜಗತ್ತಿನ ಜನರನ್ನು ಈ ದುರ್ಭಾವನಾ ಪೂರ್ಣ ವಿದೇಶೀ ಷಡ್ಯಂತ್ರವನ್ನು ವಿಫಲಗೊಳಿಸಲು, ಆರ್ಯ ಸಮಾಜದೊಂದಿಗೆ ಸಹಕರಿಸಬೇಕೆಂದು ಪ್ರಾರ್ಥಿಸುತ್ತೇನೆ.

ಇಷ್ಟೇ ಅಲ್ಲದೆ ದೇಶದ ಆಂತರಿಕ ಭಾಗಗಳಲ್ಲಿ ಮುಸ್ಲಿಂ ಇತಿಹಾಸ ಮತ್ತು ಪರಂಪರೆಗನುಗುಣವಾಗಿ ದಂಗೆ, ಗಲಭೆಗಳನ್ನೆಬ್ಬಿಸಿ ತನ್ಮೂಲಕ ಧಾರ್ಮಿಕ ಹಾಗೂ ರಾಜಕೀಯ ಅವ್ಯವಸ್ಥೆ ಹುಟ್ಟು ಹಾಕಲು ವ್ಯವಸ್ಥಿತ ಪ್ರಯತ್ನ ನಡೆಯುತ್ತಾ ಇದೆ. ಇದನ್ನು ತಡೆಗಟ್ಟಲು ಇರುವ ಏಕಮೇವ ಉಪಾಯವೆಂದರೆ ಹಿಂದೂ ಜನಾಂಗದ ಪ್ರಚಂಡ ಸಂಘಟನೆ ಮಾತ್ರ ಇದಕ್ಕಾಗಿ ಎಲ್ಲಾ ದೇಶಭಕ್ತ ಸಮುದಾಯದವರೂ ಒಂದಾಗಿ ಯೋಗ್ಯ ಕಾರ್ಯಕ್ರಮವನ್ನು ರೂಪಿಸಿಕೊಳ್ಳಬೇಕಾದುದು ಇಂದಿನ ತುರ್ತು ಅಗತ್ಯವಾಗಿದೆ.

ಈ ಉದ್ದೇಶ್ಯದ ಅಂಗವಾಗಿ ದಕ್ಷಿಣ ಭಾರತದ ಪ್ರತಿಯೊಂದು ಹಳ್ಳಿ ಪಟ್ಟಣಗಳಲ್ಲಿ ಆರ್ಯಸಮಾಜಗಳ ಸ್ಥಾಪನೆ ಮಾಡಿ ತನ್ಮೂಲಕ ವೈದಿಕ ಧರ್ಮ ಪ್ರಚಾರವನ್ನು ಜನಸಾಮಾನ್ಯರ ವರೆಗೆ ತಲುಪಿಸಲು ಪ್ರಯತ್ನಿಸಬೇಕಾಗಿದೆ, ದೇಶದ ಎಲ್ಲೆಡೆಗಳ ಆರ್ಯಸಮಾಜಗಳು, ಆರ್ಯಪ್ರತಿನಿಧಿಗಳು. ಶಿಕ್ಷಣ ಸಂಸ್ಥೆಗಳು, ಆರ್ಯ ಸಂಘಟನೆಗಳು ಈ ಮಹಾನ್ ಉದ್ದೇಶದ ಪೂರ್ತಿಗಾಗಿ ಕನಿಷ್ಠ ಐದು ಕೋಟಿ ರೂಪಾಯಿಗಳ ಧನರಾಶಿಯನ್ನು ಒಟ್ಟುಗೂಡಿಸಲು ಪ್ರಯತ್ನಿಸಬೇಕಾಗಿದೆ. ಇದರ ಸಹಾಯದಿಂದ ಧರ್ಮ ಪ್ರಚಾರಕರನ್ನು ತಯಾರಿಸಿ, ಗುಡ್ಡಗಾಡು ಪ್ರದೇಶಗಳಲ್ಲಿ ಇನ್ನಿತರ ವಿಮತೀಯ ಚಟುವಟಿಕೆಗಳಿಗೆ ವೈದಿಕ ಧರ್ಮ ಪ್ರಚಾರಕ್ಕಾಗಿ ಕಳುಹಿಸಬೇಕಾಗಿದೆ.

ಮಹರ್ಷಿ ದಯಾನಂದ ನಿರ್ವಾಣ ಶತಾಬ್ದಿಯ ಅಂತರ ರಾಷ್ಟ್ರೀಯ ಅಧಿವೇಶನ ೧೯೮೩ ರ ದಶಂಬರದಲ್ಲಿ ದೆಹಲಿಯಲ್ಲಿ ನಡೆಯಲಿದೆ. ಅಷ್ಟರಲ್ಲಿ ಭಾರತದ ಎಲ್ಲೆಡೆಗಳಲ್ಲಿ ಆರ್ಯ ಸಮಾಜಗಳ ಸ್ಥಾಪನೆ ಆಗಬೇಕಾಗಿದೆ. ಇದಕ್ಕಾಗಿ ಆರ್ಯಜನರು ಹೆಚ್ಚು ಹೆಚ್ಚಾಗಿ 'ಧರ್ಮ ರಕ್ಷಾ ಮಹಾಭಿಯಾನ' ಆಂದೋಳನದಲ್ಲಿ ಸಕ್ರಿಯ ಪಾತ್ರವಹಿಸಬೇಕೆಂದು ಮನವಿ ಮಾಡುತ್ತೇನೆ. ಇದರಲ್ಲಿ ನಾವು ಸಫಲರಾದೆವೆಂದಲ್ಲಿ ದೇಶವ್ಯಾಪಿಯಾದ ಜಾತಿ ಭೇದ, ಸ್ಪೃಶ್ಯಾಸ್ಪೃಶ್ಯ ಭಾವ, ಪ್ರಾಂತೀಯತೆ, ಸಂಕುಚಿತ ಭಾವ, ರಾಷ್ಟ್ರೈಕ್ಯದ ವಿಭಜನ ಶಕ್ತಿಗಳು ಮುಂತಾದ ಎಲ್ಲಾ ದಾನವೀ ಶಕ್ತಿಗಳು ನಿರ್ನಾಮವಾಗುವುದರಲ್ಲಿ ಸಂಶಯವಿಲ್ಲ.

## ಸರಕಾರಕ್ಕೆ ಮನವಿ

ದೇಶವು ಎದುರಿಸುತ್ತಿರುವ ವಿಕಟ ಸಮಸ್ಯೆಗಳ ಪರಿಹಾರಕ್ಕೆ, ಈ ಕೆಲವು ಸಲಹೆಗಳನ್ನು ಭಾರತ ಸರಕಾರದ ಮುಂದಿಡುವುದು ನನ್ನ ಕರ್ತವ್ಯವೆಂದು ಭಾವಿಸಿದ್ದೇನೆ.

೧) ಮಾನ್ಯ ರಾಷ್ಟ್ರಪತಿ ಹಾಗೂ ಪ್ರಧಾನ ಮಂತ್ರಿಗಳಲ್ಲಿ ನಾನು ನಿವೇದಿಸುವುದೇನೆಂದರೆ, ದೇಶದ ಗಡಿ ಪ್ರದೇಶದಲ್ಲಿ ಆಗಬಹುದಾದ ಆಕ್ರಮಣಗಳನ್ನು ಎದುರಿಸಲು ಎಷ್ಟೇ ಸಬಲ ಸೇನೆಯನ್ನು ಹೊಂದಿದ್ದರೂ ಸಹ, ದೇಶದ ಆಂತರಿಕ ಸ್ಥಿತಿ ಹದಗೆಟ್ಟಿದ್ದಲ್ಲಿ, ದೇಶದ ಹೊರಗಿನ ಒಂದು ಸಣ್ಣ ಕಿಡಿಯೂ ಮಹಾವಿಸ್ಫೋಟನೆಯನ್ನು ಮಾಡಲು ಕಾರಣವಾಬಲ್ಲದು. ಅಲ್ಪ ಸಂಖ್ಯಾಕರೆಂದು ಹೇಳಲಾದ ಮುಸಲ್ಮಾನ, ಕ್ರೈಸ್ತ ಹಾಗೂ ಆಕಾಲಿಗಳು ಇಂದು ಭಾರತದ ಅಖಂಡತೆಗೆ ಪಂಥಾಹ್ವಾನ ನೀಡುತ್ತಿರುವುದು ಇಂದು ಅತಿಸ್ಪಷ್ಟವಾಗಿ

ಗೋಚರವಾಗುತ್ತಿದೆ, ಇದರತ್ತ ನಾನು ಈ ಮುಂಚೆಯೇ ಗಮನ ಸೆಳೆದಿದ್ದೇನೆ.

೨) ವಾಸ್ತವಿಕತೆಯ ಮೇಲೆ ಪರದೆಯೆಳೆಯುವ ಬದಲು ಪರಿಸ್ಥಿತಿಯ ಯಥಾ ಯೋಗ್ಯ ಅರಿವಿಗಾಗಿ ಪ್ರಯತ್ನಿಸಬೇಕೆಂದು ಭಾರತ ಸರಕಾರದ ಕರ್ಣಧಾರರಲ್ಲಿ ಮನವಿ ಮಾಡಿಕೊಳ್ಳುತ್ತೇನೆ.

೩) ಕಾಶ್ಮೀರದ ಅಸ್ಥಿರ ಸ್ಥಿತಿಯನ್ನು ಸ್ಥಿರಗೊಳಿಸಲು ಭಾರತದ ಅಖಂಡತೆಯಲ್ಲಿ ಅದನ್ನು ಒಂದುಗೂಡಿಸಲು ಭಾರತೀಯ ಸಂವಿಧಾನದ ೩೭೦ನೇ ಕಲಮನ್ನು ತೆಗೆದು ಹಾಕ ಬೇಕು.

೪) ನಾಗಾಲ್ಯಾಂಡ್, ಮಿಜೋರಮ್- ಮುಂತಾದೆಡೆಗಳಲ್ಲಿ ಕ್ರೈಸ್ತರು ನಡೆಸಲಾಗು ತ್ತಿರುವ ರಾಷ್ಟ್ರ ವಿರೋಧಿ ಕೃತ್ಯಗಳ ಬಗೆಗೆ ತೀವ್ರಗಮನ ಹರಿಸಬೇಕಾದುದು ಅಗತ್ಯ. ದೇಶದ ವಿಭಿನ್ನ ನಗರಗಳಲ್ಲಿ ಕೋಮುಗಲಭೆಗಳನ್ನು ಎಬ್ಬಿಸಿ ಬಹು ಸಂಖ್ಯಾಕರಾದ ಹಿಂದುಗಳನ್ನೂ, ಸರಕಾರವನ್ನೂ ಬೆದರಿಸಲಾಗುತ್ತಿರುವ ಪ್ರಯತ್ನಗಳನ್ನು ಬಲಪ್ರಯೋಗದಿಂದ ಅಡಗಿಸ ಬೇಕು.

೫) ಭಾರತವನ್ನು ಇನ್ನೊಮ್ಮೆ ವಿಭಜಿಸುವ ಹಂಚಿಕೆಯಿಂದ ಮುಂದಿಡಲಾಗುತ್ತಿರುವ ಅರಾಷ್ಟ್ರೀಯ ಬೇಡಿಕೆಗಳನ್ನು ಸರ್ವಥಾ ಮನ್ನಿಸತಕ್ಕದ್ದಲ್ಲ.

(೬) ಎಲ್ಲೆಲ್ಲಿ 'ದಾರುಲ್-ಹರಬ್' (ಮುಸ್ಲಿಮರಲ್ಲದವರು ಇರುವ ಸ್ಥಳ), ಇವೆಯೋ ಅಲ್ಲೆಲ್ಲಾ ದಂಗೆ, ಗಲಭೆ, ಲೂಟಿ ಮತ್ತು ಅರಾಜಕತೆಯನ್ನು ಕೆರಳಿಸಿ 'ದಾರುಲ್ ಇಸ್ಲಾಂ' (ಇಸ್ಲಾಮೀ ಸ್ವರ್ಗ)' ಆಗಿ ಪರಿವರ್ತಿಸುವ ಪ್ರಯತ್ನ ಮಾಡುತ್ತಾ ಬಂದಿರುವುದು ಇಸ್ಲಾಂನ ಐತಿಹಾಸಿಕ ಪರಂಪರೆಯೇ ಆಗಿದೆ. 'ಫಂಡಮೆಂಟಲಿಸ್ಟ್ ಇಸ್ಲಾಮೀ' ಸಂಘಟನೆ ಭಾರತದ ಲ್ಲಿಯೂ ಇದೇ ಷಡ್ಯಂತ್ರಗಳನ್ನು ನಡೆಸಲು ಪ್ರಯತ್ನ ಶೀಲವಾಗಿದೆ. ಓಟಿನ ರಾಜಕಾರಣ ದಿಂದಾಗಿ ಎಲ್ಲಾ ರಾಜಕೀಯ ಪಕ್ಷಗಳೂ ಅಲ್ಪ ಸಂಖ್ಯಾತಕರೆನಿಸಿದ ಇವರ ದುರಭಿಸಂಧಿಗೆ ಬಲಿಯಾಗುವ ಸಾಧ್ಯತೆಗಳು ಕಂಡು ಬರುತ್ತಿವೆ. ಆದುದರಿಂದ ಈ ಆರ್ಯ ಮಹಾ ಸಮ್ಮೇಳ ನದ ಮೂಲಕ ನಮ್ಮ ಬೇಡಿಕೆ ಏನೆಂದರೆ ಈ ಓಟಿನ ಭ್ರಷ್ಟ ರಾಜಕಾರಣದಲ್ಲಿ ಆಮೂಲಾಗ್ರ ಪರಿವರ್ತನೆ ಮಾಡಬೇಕು.

೭) ದೇಶದ ಅಖಂಡತೆ, ಸುರಕ್ಷಿತತೆ ಮತ್ತು ಶಾಂತಿ ಸ್ಥಾಪನೆಯಲ್ಲಿ ಬಹು ದೊಡ್ಡ ವಿಘ್ನಕಾರಿಗಳೆಂದರೆ ವಿವಿಧ ವ್ಯಕ್ತಿಗತ ಕಾನೂನು (ಪರ್ಸನಲ್ ಲಾ)ಗಳು. ಈ ಸಿವಿಲ್ ಲಾ ಹಿಂದುಗಳಿಗೆ, ಮುಸಲ್ಮಾನರಿಗೆ, ಕ್ರೈಸ್ತರಿಗೆ, ಯಹೂದಿಗಳಿಗೆ ಬೇರೆ ಬೇರೆಯಾಗಿದೆ. ಇದರಿಂದ ಸಾಮಾಜಿಕ ಅಸಮಾನತೆಯೇ ಅಲ್ಲದೆ ಪರಸ್ಪರರಲ್ಲಿ ಭೇದ ಭಾವ ವೃದ್ಧಿಯಾಗಲು ಕಾರಣವಾ ಗುತ್ತದೆ. ಇಷ್ಟೇ ಅಲ್ಲ, ಇದು ಕೋಮು ಗಲಭೆಗಳಿಗೂ ಕಾರಣವಾಗಿದೆ. ಆದ್ದರಿಂದ ಈ ಬೇರೆ ಬೇರೆ ಸಿವಿಲ್ ವ್ಯವಸ್ಥೆಗಳನ್ನು ಕೊನೆಗಾಣಿಸಿ ಇಡೀ ಭಾರತಕ್ಕೆ ಅನ್ವಯಿಸುವ 'ಏಕ ರೂಪದ

ನಾಗರಿಕ ಕಾಯಿದೆ' (ಸಿವಿಲ್ ಕೋಡ್)ಯನ್ನು ಜಾರಿಗೊಳಿಸಬೇಕು.

ಇಂದು ಮಹಾನ್ ಧರ್ಮ ಹಾಗೂ ಸಂಸ್ಕೃತಿಗಳ ವಾಹಿನಿಯನ್ನು ಉತ್ತರದಿಂದ ದಕ್ಷಿಣಕ್ಕೆ, ದಕ್ಷಿಣದಿಂದ ಉತ್ತರಕ್ಕೆ, ಪೂರ್ವದಿಂದ ಪಶ್ಚಿಮಕ್ಕೆ ನಿರಂತರ ಹರಿಯುವಂತೆ ಮಾಡಲು ಆರ್ಯಸಮಾಜವು 'ಧರ್ಮರಕ್ಷಾ ಅಭಿಯಾನ' ಆಂದೋಳನವನ್ನು ಕೈಗೊಂಡಿದೆ. ವೈದಿಕ ಧರ್ಮವನ್ನು, ಆರ್ಯ ಸಂಸ್ಕೃತಿಯನ್ನು ರಕ್ಷಿಸಿ, ವೃದ್ಧಿಸಬೇಕಾದ ದೊಡ್ಡ ಹೊಣೆಗಾರಿಕೆಯನ್ನು ಹೊರಲು ನಾವು ಭುಜಗಳನ್ನೊಡ್ಡಬೇಕಾಗಿದೆ. ಇದನ್ನು ನಾವು ನಿರ್ವಹಿಸಬಲ್ಲೆವೆಂಬ ಭರವಸೆ ನನಗಿದೆ.

ಉತ್ತರಭಾರತದಿಂದ ಆಗಮಿಸಿರುವ ಆರ್ಯ ಬಂಧುಗಳೆಲ್ಲರ ಪರವಾಗಿ ದಕ್ಷಿಣಭಾರತದ ಎಲ್ಲಾ ಬಂಧುಗಳಿಗೆ ಹಾರ್ದಿಕ ಶುಭ ಕಾಮನೆಗಳನ್ನು ಕೋರುತ್ತೇನೆ. ಹಾಗೂ ಇಷ್ಟು ದೊಡ್ಡ ಸಂಖ್ಯೆಯಲ್ಲಿ ಈ ಆರ್ಯಸಮ್ಮೇಳನಕ್ಕೆ ಆಗಮಿಸಿ ನಮ್ಮ ಅಂತಃಕರಣವನ್ನು ಅರಿತಿದ್ದೀರಿ. ಹಾಗೂ ನಮ್ಮ ಭಾವನೆಗಳಿಗೆ ಬೆಂಬಲ ನೀಡಿದ್ದೀರಿ ಇದಕ್ಕಾಗಿ ತಮಗೆ ಕೃತಜ್ಞನಾಗಿದ್ದೇನೆ.

ಕೊನೆಯದಾಗಿ, ಮೀನಾಕ್ಷಿಪುರಂನ ಈ ಆರ್ಯ ಮಹಾ ಸಮ್ಮೇಳನದ ಯಶಸ್ಸಿಗೆ ಪ್ರತ್ಯಕ್ಷವಾಗಿ ಹಾಗೂ ಪರೋಕ್ಷವಾಗಿ ಕಾರಣರಾದ ಎಲ್ಲಾ ಆರ್ಯ ಬಂಧುಗಳಿಗೂ ನನ್ನ ಅನಂತ ಕೃತಜ್ಞತೆಗಳು. ತಾವೆಲ್ಲರೂ ಆರ್ಯಸಮಾಜದ ಕಾರ್ಯಕ್ರಮಗಳನ್ನು ನೆರವೇರಿಸುವ, ಹಾಗೂ ಮಹರ್ಷಿ ದಯಾನಂದರ ಧ್ಯೇಯ ವಾಕ್ಯ "**ಕೃಣ್ವಂತೋ ವಿಶ್ವಮಾರ್ಯಂ**"ವನ್ನು ತಮ್ಮದಾಗಿಸಿಕೊಳ್ಳುತ್ತಾ ಇಲ್ಲಿಂದ ತೆರಳುವಿರೆಂದು ಆಶಿಸುತ್ತೇನೆ.

---

## ವಿಜಯ ಸಿಕ್ಕುವ ತನಕ ಸಂಘರ್ಷ ಸಾಗುತ್ತಿರಲಿ.

### ಓಂ ಪ್ರಕಾಶ ತ್ಯಾಗಿ, ಸಾರ್ವದೇಶಿಕ ಆ. ಪ್ರ. ಸಭೆಯ ಪ್ರಧಾನಕಾರ್ಯದರ್ಶಿ

ಭಾರತೀಯ ಇತಿಹಾಸದಲ್ಲಿ ಕುರುಕ್ಷೇತ್ರ, ಪಾನೀಪತ್‌ನಂತೆ ಮೀನಾಕ್ಷಿಪುರಂ ಸಹ ನಿರ್ಣಾಯಕ ಸ್ಥಳವೆಂದು ಜ್ಞಾಪಕದಲ್ಲಿಡಲಾಗುವುದು. ಭಾರತೀಯ ಧರ್ಮ, ಸಂಸ್ಕೃತಿ, ಮತ್ತು ಸಭ್ಯತೆಗಳನ್ನು ನಿರ್ಮೂಲಗೊಳಿಸಲು 'ಧರ್ಮನಿರಪೇಕ್ಷತೆ'ಯ ಹೆಸರಿನಲ್ಲಿ ನಗ್ನ ಹೋರಾಟ ನಡೆಯುತ್ತಿದೆ. ಇದಕ್ಕೆ ಉತ್ತರವಾಗಿ ನಮ್ಮಿಂದ ಪ್ರತ್ಯಾಕ್ರಮಣವಾಗುತ್ತಿದೆ. ಯುದ್ಧವಿನ್ನೂ ಸಾಗುತ್ತಿದೆ.

ಅಸ್ವಸ್ಥತೆಯ ಕಾರಣದಿಂದ ಈ ಧರ್ಮಯುದ್ಧದ ಸಮ್ಮೇಳನದಲ್ಲಿ ಭಾಗಿಯಾಗಲು ಅಸಮರ್ಥನಿದ್ದೇನೆ. ಆದರೆ ಈ ಸಂದರ್ಭದಲ್ಲಿ ಆರ್ಯ ಬಾಂಧವರಲ್ಲಿ ನನ್ನ ನಮ್ರ ಮನವಿಯಿದೇ — ಮುಸಲ್ಮಾನ, ಕ್ರೈಸ್ತರಾದ ಎಲ್ಲಾ ಹಿಂದೂಗಳು ಸ್ವಧರ್ಮಕ್ಕೆ ಹಿಂತಿರುಗುವವರೆಗೆ ಈ ಧರ್ಮಯುದ್ಧ ನಿಲ್ಲದಿರಲಿ. ನಾನು ಸಂಸತ್ತಿನಲ್ಲಿ ಮಂಡಿಸಿದ್ದ 'ಧರ್ಮ ಸ್ವಾತಂತ್ರ್ಯ ವಿಧೇಯಕ'ಕ್ಕೆ ಇಂದು ಯಾವ ಪ್ರಾಸಂಗಿಕತೆಯೂ ಉಳಿದಿಲ್ಲ. ನಾವಿಂದು ಹೇಗಾದರೂ ಮಾಡಿ ಭಾರತದಲ್ಲಾಗುತ್ತಿರುವ ಮತಾಂತರವನ್ನು ತಡೆಗಟ್ಟಬೇಕಾಗಿದೆ. ಈ ನಿಟ್ಟಿನಲ್ಲಿ ನಮ್ಮ

ಧರ್ಮ ಯುದ್ಧ ಮತ್ತಷ್ಟು ತೀವ್ರ ಸ್ವರೂಪವನ್ನು ತಾಳಬೇಕಾಗಿದೆ. ಇದನ್ನು 'ಮತೀಯವಾದ' ಎಂದು ಯಾರಾದರೂ ಹೀಯಾಳಿಸಿದರೂ ನಾವದನ್ನು ಲಕ್ಷಿಸಬಾರದು. ಇದನ್ನು ನಾವು ಪ್ರಶಂಸೆಯೆಂದೇ ತಿಳಿಯಬೇಕು. ಇಸ್ಲಾಂ ಮತ್ತು ಕ್ರೈಸ್ತ ಮತಗಳಿಂದು ನಮ್ಮ ಮೇಲೆ ನೇರ ಆಕ್ರಮಣವನ್ನು ಮಾಡಿವೆ. ಆದ್ದರಿಂದ "ಧರ್ಮ ನಿರಪೇಕ್ಷತೆ"ಯನ್ನು ಮುಂದೊಡ್ಡುವುದು ಆತ್ಮ ಘಾತಕವಾಗಿದೆ. ನಮ್ಮ ಈ ಧರ್ಮ ಯುದ್ಧದಲಕ್ಷ್ಯ ದೇಶ ರಕ್ಷಣೆ, ರಾಷ್ಟ್ರ ರಕ್ಷಣೆ ನಮ್ಮ ರಕ್ಷಣೆಯೂ ಆಗಿದೆ; ಮಾನವತಾವಾದೀ ಸಂಸ್ಕೃತಿ ಮತ್ತು ಸಭ್ಯತೆಯ ರಕ್ಷಣೆಯೂ ಆಗಿದೆ.

---

## ಶಿವರಾತ್ರಿಯ ಸಂದೇಶವಿದು !

**ಲೇ – ಯುಧಿಷ್ಠಿರ ವಿಮಾಸಕ**

ಭಾರತದಲ್ಲಿ ಎಷ್ಟೆಲ್ಲಾ ಹಬ್ಬಗಳಿವೆಯೋ ಅವುಗಳಲ್ಲಿ ಕೆಲವು ಪ್ರಕೃತಿ ವಿಶೇಷತೆ ಯೊಂದಿಗೆ ಸಂಬಂಧವನ್ನು ಹೊಂದಿದ್ದರೆ, ಇನ್ನು ಕೆಲವು ಮಹಾಪುರುಷರ ಜೀವನದ ಯಾವು ದಾದರೊಂದು ಮಹತ್ವ ಪೂರ್ಣ ಘಟನೆಯನ್ನು ಆಧಾರವಾಗಿ ಹೊಂದಿವೆ. ಮತ್ತು ಕೆಲವು ಹಬ್ಬಗಳನ್ನು ಮಹಾಪುರುಷರ ಜೀವನದ ಸ್ಮರಣೆಯನ್ನು ಜೀವಂತವಾಗಿರಿಸಲು ಅವರ ಜನ್ಮ ದಿನದೊಂದಿಗೆ ಸಂಯೋಜಿಸಲಾಗಿವೆ.

ಶಿವರಾತ್ರಿ ಹಬ್ಬದ ಸಂಬಂಧವು ಪರಮ ಪವಿತ್ರನೂ, ಲೋಕ ಕಲ್ಯಾಣೈಕ ನಿಷ್ಠೆಯನ್ನು ಹೊಂದಿದ್ದ ಮಹಾ ಪರಾಕ್ರಮಿ ಭಗವಾನ್ ಶಂಕರನೊಂದಿಗೆ ಇದೇ ಭಗವಾನ್ ಶಂಕರನ ಭಾರತೀಯ ಇತಿಹಾಸದ ಜಾಜ್ವಲ್ಯಮಾನವಾದ ನಕ್ಷತ್ರವೆಂದರೆ ಅತಿಶಯೋಕ್ತಿಯಲ್ಲ. ಆತನ ಜೀವನದ ವೃತ್ತಾಂತವು ಮಹಾಭಾರತದಲ್ಲಿಯೂ ಕೆಲವು ಪುರಾಣಗಳಲ್ಲಿಯೂ ಹಲವು ಪುರಾಣ ಗಳಲ್ಲಿನ ವಿಕೃತಕಲ್ಪನೆಗಳನ್ನು ಬಿಟ್ಟು) ಕಂಡು ಬರುತ್ತದೆ. ಇದರಿಂದ ಆತನ ಮಹತ್ವ ಗೋಚ ರವಾಗುತ್ತದೆ.

ಇದೇ ಶಿವರಾತ್ರಿಯಂದು ಘೋರ ತಪಸ್ಸನ್ನಾ ಚರಿಸುತ್ತಾ ಭಗವಾನ್ ಶಂಕರನು ತನ್ನ ಜ್ಞಾನ ಎಂಬ ಮೂರನೆಯ ಕಣ್ಣನ್ನು ವಿಕಾಸ ಗೊಳಿಸಿಕೊಂಡಿದ್ದನು. ಇದರ ಬಲದಿಂದಲೇ ಈ ಜ್ಞಾನವೆಂಬ ಅಗ್ನಿಯ ಪ್ರಚಂಡ ಬಲದಿಂದಲೇ ಆತನ ಜನ್ಮಜನ್ಮಾಂತರಗಳ ಸಮಸ್ತ ವಾಸನೆ ಗಳು ನಿರ್ಮೂಲವಾದವು. ಆತನು ಕಾಮದ ಮೇಲೆ ಪೂರ್ಣ ವಿಜಯವನ್ನು ಸಾಧಿಸಿದನು ಆದ್ದರಿಂದಲೇ ಈ ಕಲ್ಯಾಣ ಕಾರಿಣೀ ರಾತ್ರಿಯು 'ಶಿವರಾತ್ರಿ' ಎಂಬ ಹೆಸರಿನಿಂದ ಪ್ರಸಿದ್ಧ ವಾಯಿತು.

ಇದೇ ಶಿವರಾತ್ರಿಯು ಮೂಲ ಶಂಕರ (ಮಹರ್ಷಿ ದಯಾನಂದ) ನಿಗೂ ಕಲ್ಯಾಣಕಾರಿಣಿ ರಾತ್ರಿಯಾಯಿತು. ಇದೇ ರಾತ್ರಿಯಂದೇ ಮೂಲ ಶಂಕರನು ತನ್ನ ಗುರು-ಹಿರಿಯರೊಂದಿಗೆ ಶಿವಲಿಂಗವನ್ನು ಪೂಜಿಸಿದ್ದನು, ಹಿರಿಯರೆಲ್ಲಾ ಕ್ರಮೇಣ ನಿದ್ರಾದೇವಿಯ ಆಲಿಂಗನದಲ್ಲಿ ಸೇರಿ

ಹೋದರೂ ಬಾಲಕ ಮೂಲಶಂಕರನು ಮಾತ್ರಶ್ರದ್ಧಾ ಪೂರ್ವಕ ಜಾಗರಣೆ ಮಾಡುತ್ತಿದ್ದನು. ಆಗ ಕೆಲವು ಇಲಿಗಳು ಶಿವಲಿಂಗದ ಮೇಲೆ ಹತ್ತಿ ಅಪವಿತ್ರ ಮಾಡಿದವು. ಇದನ್ನು ನೋಡಿದ ಮೂಲ ಶಂಕರನಲ್ಲಿ ಜ್ಞಾನನೇತ್ರದ ವಿಕಾಸವಾಯಿತು. "ಸಾಧಾರಣ ಜನರು ಯಾವ ಪಾಷಾಣ ಮೂರ್ತಿಯನ್ನು ಶಿವನೆಂದು ಆರಾಧಿಸುತ್ತಾರೋ, ಅದು ನಿಜವಾದ ಶಿವನಲ್ಲ. ಅಮಿತ ಪರಾ ಕ್ರಮಿಯಾದ ಆ ಮಹಾದೇವನಲ್ಲಿ ಕ್ಷುದ್ರ ಪ್ರಾಣಿಗಳಿಂದಲೂ ತಿರಸ್ಕಾರ ಹೊಂದುವ ಈ ಮೂರ್ತಿಯೆಲ್ಲಿ ? ಕೇವಲ ಪಾಷಾಣ ಮೂರ್ತಿಯಿದು. ನಾನು ಇನ್ನು ಮೇಲೆ ಇದನ್ನು ಪೂಜಿ ಸೆನು ನಿಜವಾದ ಶಿವನ ಅನ್ವೇಷಣೆ ಮಾಡುತ್ತೇನೆ." ಎಂಬುದಾಗಿ ನಿಶ್ಚಯಿಸಿದನು. ವಿಚಾರ ಕ್ರಾಂತಿಯು ಮೂಡಿದ ಮರುಕ್ಷಣದಲ್ಲೇ ಆತನಿಗೆ ಅಲ್ಲಿ ಕುಳಿತಿರುವುದೂ ಕಷ್ಟವಾಯಿತು. ತನ್ನ ಮನದಿಂಗಿತವನ್ನು ತಂದೆಯವರಿಗೆ ಸ್ಪಷ್ಟ ಶಬ್ದಗಳಲ್ಲರುಹಿ ಅಲ್ಲಿಂದ ಮನೆಗೆ ಹಿಂದಿರು ಗಿದನು. ನಿಜವಾದ ಶಿವನನ್ನರಸುವ ಬಗ್ಗೆ ಮೂಲ ಶಂಕರನಿಗೆ ಬೋಧೆಯಾದ ಕಾರಣ ಆರ್ಯ ಜಗತ್ತಿನಲ್ಲಿ ಶಿವರಾತ್ರಿಗೆ ಬೋಧರಾತ್ರಿಯೆಂದು ಹೆಸರಾಯಿತು.

ಇದೇ ರಾತ್ರಿಯಂದು ಮೂಲ ಶಂಕರನ ಹೃದಯದಲ್ಲಿ ವಿಕಾಸಗೊಂಡ ಜ್ಞಾನಾಂಕುರವು ಉತ್ತರೋತ್ತರ ವೃದ್ಧಿಯಾಗುತ್ತಾ ಹೋಯಿತು, ಒಂದು ದಿನ ಮೂಲ ಶಂಕರನು ತನ್ನ ವೈಭವ ಸಂಪನ್ನವಾದ ಗೃಹದ ಬಂಧನವನ್ನು ಕಡಿದುಕೊಂಡು ಶಿವನ ಅನ್ವೇಷಣೆಯ ಮಾರ್ಗದ ಪಥಿಕ ನಾದನು ನಿಜವಾದ ಶಿವನನ್ನು ಪ್ರಾಪ್ತಿಸಿಕೊಳ್ಳಲು ಹಿಂಸ್ರ ಜೀವಿಗಳಿಂದ ಕೂಡಿದ ಘೋರಾ ರಣ್ಯಗಳಲ್ಲಿ, ಪರ್ವತಾಗ್ರಗಳಲ್ಲಿ, ಕಂದರಗಳಲ್ಲಿ "ಹಿಮಾಚ್ಛಾದಿತ ಗಿರಿಶಿಖರಗಳಲ್ಲಿ ಅಲೆದನು ಯೋಗಾಭ್ಯಾಸ ಪೂರ್ವಕವಾದ ಘೋರ ತಪಶ್ಚರ್ಯೆಯ ಮೂಲಕ ಕೊನೆಗೊಮ್ಮೆ ದಯಾನಿಧಿ ಆನಂದ ಕಂದನಾದ ಶಿವನನ್ನು ಸಾಕ್ಷಾತ್ಕರಿಸಿ ಸ್ವಯಂ "**ದಯಾನಂದ**" ನೆನೆಸಿದನು.

ದಯೆಯ, ಆನಂದದ ಮೂಲವಾದ ನಿಜವಾದ ಶಿವನನ್ನು ಸಾಕ್ಷಾತ್ಕರಿಸಿಕೊಂಡ ಮಹರ್ಷಿ ದಯಾನಂದರು ಶಿವರಾತ್ರಿಯಂದು ಅನವರತ ತಪಶ್ಚರ್ಯೆಯ ಮೂಲಕ ಗಳಿಸಿದ ಸಮೃದ್ಧ ಜ್ಞಾನಾಮೃತವನ್ನು ತನ್ನಲ್ಲಿಯೇ ಇರಿಸಿ ಕೊಳ್ಳಲಿಲ್ಲ. ಅವಿ ದ್ಯಾಂಧಕಾರದಿಂದಾವೃತವಾಗಿ ಘೋರ ದುಃಖದಿಂದ ಮೃತ ಪ್ರಾಯವಾಗಿದ್ದ ಈ ಜಗತ್ತಿನ ಜನರನ್ನು ಜ್ಞಾನಾಮೃತ ಸಿಂಚನದಿಂದ ಪ್ರಕಟಿತಗೊಳಿಸುವ ಮಹಾನ್ ಉದ್ದೇಶಕ್ಕಾಗಿ ತನ್ನ ಜೀವನವನ್ನೇ ಸಮರ್ಪಿಸಿದರು. ಈ ಕಾರ್ಯದಲ್ಲಿ ಅವರು ಅನುಭವಿಸಬೇಕಾಗಿ ಬಂದ ಕಷ್ಟ ನಷ್ಟಗಳು ಯಾತನೆಗಳು ಅಗಣಿತವಾದುವು. ಇದಕ್ಕಾಗಿಯೇ ಜೀವವನ್ನೂ ಬಿಡಬೇಕಾಯಿತು. ಆದರೆ ಎಂದಿಗೂ ಅವರು ಕರ್ತವ್ಯ ಪಥದಿಂದ ಹಿಮ್ಮೆಟ್ಟಲಿಲ್ಲ. ಸಿಂಹ ಸದೃಶ ಧೈರ್ಯದಿಂದ ಜಗತ್ತಿನ ಅಜ್ಞಾನಾಂಧಕಾರವನ್ನು ತೊಲಗಿಸುವ ಕಾರ್ಯವನ್ನು ಮಾಡುತ್ತಾ ಮುನ್ನಡೆದರು. ತನ್ನ ಉಪದೇಶಗಳಿಂದ ಇಂದಿಗೂ, ಎಂದೆಂದಿಗೂ ಸಂದೇಶವನ್ನು ನೀಡುತ್ತಲೇ ಇರುತ್ತಾರೆ.

ಬಾಲಕ ಮೂಲ ಶಂಕರನನ್ನು ಮಹರ್ಷಿ ದಯಾನಂದರನ್ನಾಗಿಸಿದ ಶ್ರೇಯಸ್ಸು ಈ ಶಿವರಾತ್ರಿಯಂದು.ಪ್ರತಿ ವರ್ಷವೂ ಶಿವರಾತ್ರಿಬರುತ್ತದೆ, ಹೋಗುತ್ತದೆ. ಆದರೆ ಅದು ನೀಡುವ ಭವ್ಯ ಸಂದೇಶವನ್ನು ಗ್ರಹಿಸುವವರು ತೀರಾ ಕಡಿಮೆ. ಈ ದಿನದಂದು ಭಗವಾನ್ ದಯಾ ನಂದರ ಜೀವನ ಸಂದೇಶಗಳ ಬಗೆಗೆ ಕೇಳಿ ತಿಳಿದುಕೊಳ್ಳುತ್ತೇವೆ. ಓದುತ್ತೇವೆ. ವ್ಯಾಖ್ಯಾನಗಳ

ಮೂಲಕ ತಿಳಿದುಕೊಳ್ಳುತ್ತೇವೆ ಆದರೆ ಇದು ಕಿವಿ, ಕಣ್ಣು ಮತ್ತು ಬಾಯಿಯ ಕೆಲಸ ಮಾತ್ರ ಇದರ ಪ್ರಭಾವ ನಮ್ಮ ಮಸ್ತಿಷ್ಕದ ಮೇಲಾಗಲಿ, ಹೃದಯದ ಮೇಲಾಗಲಿ ಬಿದ್ದಿಲ್ಲ. ಈ ಕಾರಣದಿಂದಲೇ ನಮ್ಮ ಜೀವನದಲ್ಲಿ ಯಾವುದೇ ವರ್ಚಸ್ಸು, ಸಮೃದ್ಧಿ, ಸಾರ್ಥಕತೆಗಳು ಗೋಚರವಾಗಿಲ್ಲ.

ಶಿವರಾತ್ರಿ ಮಾನವ ಮಾತ್ರರಿಗೆ ನೀಡುವ ಸಂದೇಶ ಒಂದೇ- ಅದೇ ಸತ್ಯದ ಪ್ರಾಪ್ತಿ. ಪರಮಾತ್ಮನು ಸ್ವಯಂ ಸತ್ಯ ಸ್ವರೂಪನಾಗಿದ್ದಾನೆ. ನಾವು ಅನುದಿನ ಸಂಧ್ಯಾ ವಂದನೆ ಯಲ್ಲಿ "ಸತ್ಯಂ ಪುನಾತು ಪುನಃ ಶಿರಸಿ" 'ಹೇ ಸತ್ಯ ಸ್ವರೂಪ ಪರಮಾತ್ಮ ! ನಮ್ಮ 'ಮಸ್ತಿಷ್ಕ ಗಳನ್ನು ಪುನಃ ಪವಿತ್ರಗೊಳಿಸು" ಎಂದು ಪ್ರಾರ್ಥಿಸುತ್ತೇವೆ. ಸತ್ಯ ಸ್ವರೂಪನಾದ ಪರ ಮಾತ್ಮನ ಪ್ರಾಪ್ತಿಯಾಗಬೇಕಾದರೆ ನಮ್ಮ ಬುದ್ಧಿ ಪವಿತ್ರವಾಗಬೇಕಾದುದು ಅಗತ್ಯ. ಆದ ರಿಂದಲೇ ಗಾಯತ್ರೀ ಮಂತ್ರದಲ್ಲಿ. **"ಧಿಯೋ ಯೋ ನಃ ಪ್ರಚೋದಯಾತ್"** ನಮ್ಮ ಬುದ್ಧಿಯನ್ನು ಸತ್ಕರ್ಮಗಳಿಗಾಗಿ ಪ್ರಚೋದಿಸು ಎಂದು ಕೇಳಲಾಗಿದೆ. ಸತ್ಯದ ಆಚರಣೆ ಯಿಂದ ಮಾತ್ರವೇ ಬುದ್ಧಿಯು ಪವಿತ್ರವಾಗ ಬಲ್ಲದು. **ಅಗ್ನೇನಯ ಸುಪಥಾ ರಾಯೇ**ಸತ್ಯ ಸ್ವರೂಪನಾದ ಪರಮಾತ್ಮನ ಪ್ರಾಪ್ತಿ ಸತ್ಯಾಚರಣೆಯಿಂದ ಮಾತ್ರವೇ ಸಾಧ್ಯ. ಆದ್ದರಿಂದಲೇ **"ಸತ್ಯೇನ ಲಭ್ಯಸ್ತಪಸಾ್ಯ ಹೇಷ ಆತ್ಮಾ"** ಎಂದು ಹೇಳಲಾಗಿದೆ. ಶ್ರದ್ಧೆಯಿಲ್ಲದೆ ಸತ್ಯಾಚರಣೆ ಸಾಧ್ಯವಿಲ್ಲ ಶ್ರತ್-ಸತ್ಯದಲ್ಲಿ, ಧಾ-ಧಾರಣ-ಶ್ರದ್ಧಾ, ಎನಿಸುತ್ತದೆ. ಶ್ರದ್ಧೆಯಿಲ್ಲದ ಸಂಶಯಾ ತ್ಮನು ನಾಶವಾಗುತ್ತಾನೆ. ಮನುಷ್ಯ ಜನ್ಮವನು ಹೊಂದಿಯೂ ಜೀವನದ ಗುರಿ ಸಾಧನೆಯಲ್ಲಿ ಅಸಫಲವಾಗುತ್ತಾನೆ.

ಶಿವರಾತ್ರಿಯ ಈ ಪವಿತ್ರ ಸಂದೇಶವನ್ನು ಗ್ರಹಿಸಿದ ಮೂಲಶಂಕರನು **"ಮಹರ್ಷಿ ದಯಾನಂದ"** ನೆನಿಸಿದನು. ದಯಾನಿಧಿಯಾದ ಆನಂದ ಸ್ವರೂಪ ಭಗವಂತನನ್ನು ಪ್ರಾಪ್ತಿಸಿ ಕೊಂಡು ಈ ರೀತಿ ಮೊಳಗಿದನು—"ಸತ್ಯಗ್ರಹಣ ಮಾಡಲು ಹಾಗೂ ಅಸತ್ಯವನ್ನು ತ್ಯಜಿ ಸಲು ಸದಾ ಉದ್ಯುಕ್ತರಾಗಿರಿ"

ಮಹರ್ಷಿಯು ಕೇವಲ ಶಾಬ್ದಿಕ ಸಂದೇಶ ನೀಡಲಿಲ್ಲ. ತನ್ನ ಜೀವನದಲ್ಲಿ ಅದನ್ನು ಅನುಷ್ಠಾನ ಗೈದು ಯಾವ ರೀತಿ ಅಸತ್ಯವನ್ನು ತ್ಯಜಿಸಿ, ಸತ್ಯ ಗ್ರಹಣವನ್ನು ಮಾಡಬಹುದು- ಎಂದು ತೋರಿಸಿ ಕೊಟ್ಟರು. ಅವರ ಇಡೀ ಜೀವನವೇ ಈ ಮೇಲಿನ ನಿಯಮದ ಕ್ರಿಯಾತ್ಮಕ ವ್ಯಾಖ್ಯೆಯಾಗಿದೆ.

ಬನ್ನಿರಿ. ನಾವೆಲ್ಲಾ ಈ ಶಿವರಾತ್ರಿಯ ಪವಿತ್ರ ಪರ್ವದಂದು ಭಗವಾನ್ ದಯಾನಂದರ ಗೌರವ ಗುಣಗಾನ ಮಾಡುತ್ತಾ. ತದನುಕೂಲವಾಗಿ ನಮ್ಮ ಜೀವನದಲ್ಲಿ ಅಳವಡಿಸಿಕೊಳ್ಳಲು ಪ್ರಯತ್ನಿಸೋಣ. **"ಮನಸ್ಯೇಕಂ ವಚಸ್ಯೇಕಂ ಕರ್ಮಣ್ಯೇಕಂ ಮಹಾತ್ಮನಾಂ"** ಎಂಬಂತೆ ತ್ರಿಕರಣ ಶುದ್ಧರಾಗೋಣ.

ಮನುಷ್ಯನ ಪತನದ ಮುಖ್ಯಕಾರಣ ಅವನ ಅಹಂಕಾರ. ಸತ್ಯಜ್ಞಾನದ ಅರಿವಾಗುವ

ವರೆಗೆ ಅಹಂಕಾರವಳಿಯದು. "ವಿದ್ಯಾದದಾತಿವಿನಯಂ" ಎಂಬಂತೆ, ಜ್ಞಾನದಗಳಿಕೆ ಮಾಡುತ್ತಾ ಸಾಗಿದಂತೆಲ್ಲಾ ವಿನಯ ತುಂಬಿ ಬರುತ್ತದೆ; ಗರ್ವ ಇಳಿಯುತ್ತದೆ. ಆದ್ದರಿಂದ ಈ ಶಿವರಾತ್ರಿಯ ಪುಣ್ಯ ಪರ್ವದಲ್ಲಿ ಕೇವಲ ದಯಾನಂದ ಗುಣಗಾನವಷ್ಟರಿಂದಲೇ ತೃಪ್ತರಾಗದೆ ಶ್ರದ್ಧಾನ್ವಿತರಾಗಿ ಸತ್ಯದ ಮಾರ್ಗದಲ್ಲಿ ಮುನ್ನಡೆಯಲು ಪ್ರಯತ್ನಿಸೋಣ. ಆಗ ಎಲ್ಲಾ ರಾತ್ರಿಗಳೂ, ದಿನಗಳೂ 'ಶಿವ' ಮಂಗಳಕರವೇ ಆಗುವುದರಲ್ಲಿ ಸಂಶಯವಿಲ್ಲ.

---

# ಯಾರು ಈ ಶಿವ ?

(ಲೇಖಕ : ಜ್ಯೇಷ್ಠ ವರ್ಮನ್)

ಭಗವತೀ ವೇದಮಾತೆಯು ಪರಮಪಿತ ಪರಮಾತ್ಮನನ್ನು ನಾನಾ ರೀತಿಯಿಂದ ವರ್ಣಿಸಿದ್ದಾಳೆ. ಎಲ್ಲಾ ಲೋಕ ಲೋಕಾಂತರಗಳಿಂದಲೂ, ಸಹಸ್ರಾರು ಬ್ರಹ್ಮಾಂಡಗಳಿಗಿಂತಲೂ ಬೃಹತ್ತರನಾಗಿರುವುದರಿಂದ ಅವನನ್ನು ಬ್ರಹ್ಮನೆಂದೂ, ವಿಶ್ವವನ್ನೆಲ್ಲಾ ವ್ಯಾಪಿಸಿ ಕೊಂಡಿರುವುದರಿಂದ ವಿಷ್ಣುವೆಂದೂ, ಸಮರ್ಥರಲ್ಲಿ ಸರ್ವ ಶ್ರೇಷ್ಠ ಹಾಗೂ ಅವನಿಗೆ ತುಲ್ಯರಾಗಿರುವವರು ಬೇರೆ ಯಾರೂ ಇಲ್ಲದಿರುವುದರಿಂದಲೂ, ರಾಜಾಧಿ ರಾಜರುಗಳಿಗೂ ದೊಡ್ಡ ರಾಜನಾಗಿರುವುದರಿಂದಲೂ ಅವನನ್ನು ಪರಮೇಶ್ವರನೆಂದೂ ಸ್ತುತಿಮಾಡಿದ್ದಾಳೆ. ದೇವತೆಗಳಲ್ಲೇ ಮಹತ್ವಮನಾಗಿರುವುದರಿಂದ ಆ ಪರಮಾತ್ಮನೇ ಮಹಾದೇವನೆಂದೆಣಿಸಿ ಕೊಂಡಿದ್ದಾನೆ. ದುಷ್ಟರನ್ನು, ಪಾಪಿಗಳನ್ನು ರೋದಿಸುವವನಾದುದರಿಂದ ಅವನೇ ರುದ್ರ; ಸರ್ವಕಲ್ಯಾಣಕಾರಿಯಾದ ಕಾರಣ ಅವನೇ ಶಂಕರ, ಅವನೇ ಶಿವ. ಅವನು ಸರ್ವಾಂತರ್ಯಾಮಿ, ನಿರಾಕಾರ, ನಿರುಪಮ, ನಿರ್ವಿಕಾರಿ. ಅಜರ, ಅಜನ್ಮ, ಅಮರ, ನಿತ್ಯ, ಪವಿತ್ರ, ಸರ್ವಜ್ಞ, ಸರ್ವಶಕ್ತಿಶಾಲಿಯಾಗಿದ್ದಾನೆ. ಅವನು ಅಕಾಯನು, ಸ್ತ್ರೀ ಪುರುಷಾದಿ ಲಿಂಗ ಭೇದಗಳಿಲ್ಲದವನು. ಅವನಿಗೆ ಸಮಾನರಾಗಲೀ, ಅವನಿಂದ ಶ್ರೇಷ್ಠರಾಗಲೀ ಬೇರೆ ಯಾರು ಇಲ್ಲ. ಆದರೆ, ವೈದಿಕ ಶಬ್ದಗಳು ಧಾತ್ವರ್ಥ ಪ್ರಕಾಶಕಗಳೂ, ಅನೇಕಾರ್ಥ ವಾಚಿಗಳೂ ಆಗಿವೆ. ಹೀಗಿರುವುದರಿಂದ ಅಧ್ಯಾತ್ಮ ಪ್ರಕರಣ ಅಥವಾ ಉಪಾಸನಾ ಕಾಂಡದಲ್ಲಿ ಯಾವ ಶಬ್ದಕ್ಕೆ ಪರಮಾತ್ಮನೆಂಬ ಅರ್ಥವಿದೆಯೋ, ಅದೇ ಶಬ್ದಕ್ಕೆ ಅನ್ಯ ಪ್ರಕರಣಗಳಲ್ಲಿ ಅನ್ಯ ಅರ್ಥಗಳಾಗುತ್ತವೆ. ಆದುದರಿಂದ ಮಹಾದೇವ ಮೊದಲಾದ ಶಬ್ದಗಳು ಅಧ್ಯಾತ್ಮಿಕ ಪ್ರಕರಣದಲ್ಲಿ ಪರಮಾತ್ಮನ ವಿಶೇಷಣವಾಗಿದ್ದರೂ, ಬೇರೆ ಪ್ರಕರಣಗಳಲ್ಲಿ ಇವು ಬೇರೆ ಅರ್ಥಗಳನ್ನು ಪ್ರಕಟಿಸುತ್ತವೆ.

ಅಥರ್ವವೇದದ ಈ ಮಂತ್ರಗಳನ್ನು ನೋಡಿರಿ —

**ಸೋऽರ್ಯಮಾ ಸ ವರುಣಃ ಸ ರುದ್ರಃ ಸ ಮಹಾದೇವಃ। ರಶ್ಮಿಭಿರ್ನಭ ಆಭೃತಂ ಮಹೇಂದ್ರ ಏತ್ಯಾವೃತಃ ॥**

**ಸೋಽಗ್ನಿಃ ಸ ಉ ಸೂರ್ಯಃ ಸ ಉ ಏವ ಮಹಾಯಮಃ। ರಶ್ಮಿಭಿರ್ನಭ ಆಭೃತಂ ಮಹೇಂದ್ರ ಏತ್ಯಾವೃತಃ॥**

(ಅಥರ್ವಂ ಕಾಂಡ ೧೩, ಸೂಕ್ತ ೪ ಮಂತ್ರ ೪, ೫.)

ಈ ಮಂತ್ರಗಳಲ್ಲಿ ಸ್ಪಷ್ಟವಾಗಿ, ತನ್ನ ರಶ್ಮಿಗಳ ಜಾಲವನ್ನು ನಭೋಮಂಡಲದಲ್ಲಿ ಹರಡಿಸುತ್ತಾ ಬರುತ್ತಿರುವ ಭಗವಾನ್ ಭಾಸ್ಕರನ ವರ್ಣನೆ ಇದೆ. ಅವನೇ ಅರ್ಯಮಾ, ವರುಣ, ರುದ್ರ, ಮಹಾದೇವ, ಅಗ್ನಿ, ಮಹಾಯಮ ಮೊದಲಾದ ವಿಶೇಷಣಗಳಿಂದ ವರ್ಣಿಸಲ್ಪಟ್ಟಿದ್ದಾನೆ. ಪುನಃ –

**ನಮೋ ಮಿತ್ರಸ್ಯ ವರುಣಸ್ಯ ಚಕ್ಷಸೇ ಮಹಾದೇವಾಯ**
**ತದೃತಂ ಸಪರ್ಯತ । ದೂರೇ ದೃಶೇ ದೇವ ಜಾತಾಯ**
**ಕೇತವೇ ದಿವಸ್ಪುತ್ರಾಯ ಸೂರ್ಯಾಯ ಶಂಸತ ॥**

(ಋಗ್ವೇದ ೧೦–೩೭–೧)

ಈ ಮಂತ್ರದಲ್ಲೂ ಸೂರ್ಯನನ್ನೇ ಮಹಾದೇವ ಮೊದಲಾದ ಶಬ್ದಗಳಿಂದ ವರ್ಣಿಸಲಾಗಿದೆ. ಆದುದರಿಂದ ವೇದಗಳಲ್ಲಿ ಮಹಾದೇವ ಶಿವನೆಂದರೆ ಸೂರ್ಯನೆಂಬ ಅರ್ಥವಾಗುವುದೂ ನಿಶ್ಚಿತ.

ಸೂರ್ಯನು ಯಾವ ರೀತಿಯಲ್ಲಿ ಶಿವ ಅರ್ಥಾತ್ ಪ್ರಾಣಿಕೋಟಿಗಳಿಗೆ ಕಲ್ಯಾಣಕಾರಿಯಾಗಿದ್ದಾನೆಂಬುದನ್ನು ವಿವರಿಸುವ ಅಗತ್ಯ ನನಗಿಲ್ಲಿ ಕಾಣುವುದಿಲ್ಲ. **"ದಧತು ಶಿವಂ ದೀಧಿತೀನಾಂ ಶತಾನಿ"** (ಸೂರ್ಯಶತಕಂ ೧೩) ಅರ್ಥಾತ್, ಸೂರ್ಯನ ನೂರಾರು ಕಿರಣಗಳು ಲೋಕಕ್ಕೆ ಕಲ್ಯಾಣಕಾರಿಗಳಾಗಲಿ, ಎಂದು ಮಯೂರ ಕವಿಯು ಸ್ತುತಿಸಿದ್ದಾನೆ. **"ಧೂರ್ಜಟಿಃ ಶಂಕರೋಽಸೌ"** (ಸೂರ್ಯ ಶತಕ ೯೯) ಎಂದರೆ, ಸೂರ್ಯನೇ ಧೂರ್ಜಟಿ ಶಂಕರನಾಗಿದ್ದಾನೆ, ಎಂದೂ ಇವನು ವರ್ಣಿಸಿದ್ದಾನೆ.

**ನಮಃ ಕಪರ್ದಿನೇ ಚ ವ್ಯುಪ್ತಕೇಶಾಯ ಚ ನಮಃ**
**ಸಹಸ್ರಾಕ್ಷಾಯ ಚ, ಶತಧನ್ವನೇ ಚ ನಮೋ ಗಿರಿಶಾಯ ಚ ॥**

ಯಜುರ್ವೇದ ೧೬–೨೯॥

ಈ ವೇದ ಮಂತ್ರದಲ್ಲಿ ಸಹಸ್ರಾಕ್ಷ ಸೂರ್ಯನ ಜಟೆ, ಯ ವರ್ಣನೆ ಇರುವುದಲ್ಲದೆ, ಅವನನ್ನು ಗಿರಿಶಯನೆಂದೂ ವರ್ಣಿಸಲಾಗಿದೆ. ಮೇಘರೂಪೀ ಪರ್ವತಗಳ ಮೇಲಿಂದ ವಿರಾಜಮಾನನಾಗಿರುವುದರಿಂದಲೇ ಸೂರ್ಯನು ಗಿರೀಶನೆಂದೆಣಿಸಿ ಕೊಂಡಿದ್ದಾನೆ.

**ತಸ್ಯ ಯೋಽವಾಂಚೋ ರಶ್ಮಯಸ್ತಾನಿ ಶ್ಮಶ್ರೂಣಿ । ಯ ಊರ್ಧ್ವಾಸ್ತೇ ಕೇಶಾಃ ॥** (ಜೈಮಿನೀಯ ಬ್ರಾಹ್ಮಣ ೨/೬೨)

ಎಂದರೆ, ಸೂರ್ಯನ ನಮಗೆದುರಾಗಿ ಬರುವ ಅಥವಾ ಕೆಳಭಾಗದ ಕಿರಣಗಳು ಅವನ ಶ್ಮಶ್ರು, ಅರ್ಥಾತ್ ಗಡ್ಡ ಮೀಸೆಗಳು, ಮತ್ತು ಮೇಲ್ಗಡೆಯ ಕಿರಣಗಳು ಅವನ ಕೇಶ ಅರ್ಥಾತ್ ತಲೆಕೂದಲುಗಳು. ಈ ರೀತಿ ಪ್ರಾಚೀನ ಋಷಿಗಳು ಸೂರ್ಯನನ್ನು ಒಬ್ಬ ಪುರುಷನ ರೂಪದಲ್ಲಿ ವರ್ಣಿಸಿದ್ದಾರೆ. ಆಚಾರ್ಯ ಶೌನಕರು "**ಅರ್ಚಿಭಿಃ ಕೇಶ್ಯಯಂ ತ್ವಗ್ನಿರ್ವಿದ್ಯುದ್ಭಿಶ್ಚೈವ ಮಧ್ಯಮಃ। ಅಸೌ ತು ರಶ್ಮಿಭಿಃ ಕೇಶೀ ತೇನೈನಾ ನಾಹ ಕೇಶಿನಃ**" (ಬೃಹದ್ದೇವತಾ ೧/೯೪) "ಎಂದರೆ, ದ್ಯುಲೋಕದ ಅಗ್ನಿಯಾದ ಸೂರ್ಯನ ಕಿರಣಗಳೇ ಕೇಶಗಳು, ಈ ಕೇಶಗಳಿಂದಾಗಿಯೇ ಸೂರ್ಯನು ಕೇಶಿ ಎನಿಸಿಕೊಂಡಿದ್ದಾನೆ. ಕೇಶ ವೆಂದರೆ (ಕಾಶೃ ಪ್ರಕಾಶನೇ) ಪ್ರಕಾಶ ಮಾನವಾದುದೆಂದರ್ಥ. ಸೂರ್ಯನ ಪ್ರಕಾಶದ ಕಿರಣಗಳನ್ನೇ, ಅವುಗಳ ಪ್ರಕಾಶ ಮಾನವಾಗಿರುವುದರಿಂದ ಕೇಶಗಳೆನ್ನಲಾಗಿದೆ.

ಇನ್ನು ಸೂರ್ಯದೇವನ ವಸ್ತ್ರದ ವರ್ಣನೆಯನ್ನು ನೋಡಿರಿ. "**ಅಹೋರಾತ್ರೇ ಏವ ಕೃಷ್ಣಾಜಿನಸ್ಯ ರೂಪಂ। ಅಹರೇವ ಶುಕ್ಲಸ್ಯ ರೂಪಂ ರಾತ್ರಿಃ ಕೃಷ್ಣಸ್ಯ॥**" (ಜೈಮಿನೀಯ ಬ್ರಾಹ್ಮಣ ೨/೬೨), ಅರ್ಥಾತ್, ಹಗಲು ರಾತ್ರಿಗಳೇ ಸೂರ್ಯ ದೇವನ ಕೃಷ್ಣಾಜಿನವಾಗಿದೆ. ಹಗಲು ಕೃಷ್ಣಾಜಿನದ ಬಿಳಿ ಚುಕ್ಕೆಗಳಾದರೆ, ರಾತ್ರಿಯು ಅದರ ಕಪ್ಪು ಬೊಟ್ಟುಗಳು.

ಈ ಎಲ್ಲಾ ವರ್ಣನೆಗಳಿಂದ, ಆಧುನಿಕ ಪೌರಾಣಿಕರ ಶಿವನು, ಪರಮಾತ್ಮನಲ್ಲ, ಸೂರ್ಯನ ಒಂದು ಅಲಂಕೃತ ಪ್ರತೀಕ ಎಂದು ಸ್ಪಷ್ಟವಾಗುತ್ತದೆ. ಎಂದರೆ, ಶಿವಾರಾಧನೆ ಮಾಡುವ ಮೂರ್ತಿಪೂಜಕರು ನಿಜವಾಗಿ ಪೂಜಿಸುವುದು ಪರಮಾತ್ಮನನ್ನೂ ಅಲ್ಲ, ಪರಮಾತ್ಮನ ಪ್ರತೀಕವನ್ನೂ ಅಲ್ಲ. ಅವರು ಪೂಜಿಸುವುದು ಜಡದೇವತೆಯಾದ ಸೂರ್ಯನ ಪ್ರತೀಕ ವನ್ನು. ವೇದಗಳಲ್ಲಿ ಸೂರ್ಯನ ಸ್ಪಂದನದ ವರ್ಣನೆಯಿದೆ. ಸೂರ್ಯ ಮಂಡಲದ ಸ್ಪಂದ ನವನ್ನೇ ಅವನ ನರ್ತನವೆಂದು ಹೇಳಲಾಗಿದೆ. ಋಗ್ವೇದದ ಎಂಟನೇ ಮಂಡಲ, ನವಮ ಸೂಕ್ತದಲ್ಲಿ ಸೂರ್ಯನನ್ನು ಕುರಿತಾಗಿ "ವಾಜಾನಾಂ ನೃತುಃ" ಎಂದು ವರ್ಣಿಸಲಾಗಿದೆ. ಸೂರ್ಯ ಮಂಡಲದ ಸ್ಪಂದನವೇ ನಟರಾಜ ಶಿವನ ಕಲ್ಪನೆಯ ಆಧಾರ. ನಟರಾಜನ ಸಾವಿರಾರು ಕೈಗಳು, ಮತ್ತು ಜ್ವಾಲೆಗಳು ನಿಜವಾಗಿ ದಿನಕರನ ಕರಗಳು. ಇದೇ ರೀತಿ ಶಿವನ ಮೂರು ಕಣ್ಣುಗಳು, ಪೃಥ್ವಿ, ಅಂತರಿಕ್ಷ ಮತ್ತು ದ್ಯುಲೋಕಗಳೆಂಬ ಲೋಕತ್ರಯಗಳನ್ನು ಪ್ರಕಾಶಿಸುವ ಸೂರ್ಯನ ಲಕ್ಷಣವನ್ನು ತೋರಿಸುತ್ತವೆ. ತ್ರಿನೇತ್ರ ಶಿವನು ನಿಜವಾಗಿಯೂ ಮೂರು ಲೋಕಗಳಿಗೆ ಕಣ್ಣಿನಂತಿರುವನು. ನೀಲ ಆಕಾಶದಲ್ಲಿರುವ ಮೇಘಗಳ ಗರ್ಜನೆಯನ್ನು ಮಹಾದೇವ ಸೂರ್ಯನ ಡಮರು-ನಿನಾದವೆಂದು ಕವಿಗಳು ವರ್ಣಿಸಿದ್ದಾರೆ. ವರ್ಷಣ ಗುಣ, ಎಂದರೆ ಮಳೆ ನೀರು ಸುರಿಸುವ ಗುಣಗಳಿಂದಾಗಿ ಈ ಮೇಘಗಳನ್ನು ವೃಷಭನೆಂದೂ ಹೇಳಿದ್ದಾರೆ. ಈ ಮೇಘ ರೂಪೀ ವೃಷಭದ ಮೇಲೆ ಹೊಳೆಯುತ್ತಿರುವುದರಿಂದ ಸೂರ್ಯನು ವೃಷಭ ವಾಹನನಾಗಿದ್ದಾನೆ. ಈ ಮೇಘ ರೂಪೀ ವೃಷಭವೇ, ಆಕಾಶದಲ್ಲಿ ಧ್ವಜಗಳಂತೆ ಹಾರಾಡುತ್ತಿರುವುದರಿಂದ ಅವುಗಳನ್ನು ಸೂರ್ಯ ದೇವನ ಧ್ವಜಗಳೆಂದೂ, ಸೂರ್ಯ ದೇವ

ನನ್ನು ವೃಷಭ ಧ್ವಜನೆಂದೂ ವರ್ಣಿಸಿದ್ದಾರೆ. ಸರ್ಪಣ ಶೀಲ, ಹರಿಯುವ ಸ್ವಭಾವದಿಂದಾಗಿ ಮೇಘಗಳನ್ನು ಸರ್ಪಗಳೆಂದೂ ಹೇಳಿದ್ದಾರೆ. ನಿಘಂಟುವಿನಲ್ಲಿ ಇದನ್ನೇ ಅಹಿ ಎಂದೂ ಕರೆದಿದ್ದಾರೆ. ಆದುದರಿಂದ ಶಿವನ ಮೈಮೇಲಿರುವ ಸರ್ಪಗಳು ನಿಜವಾಗಿ ಸೂರ್ಯನನ್ನು ಸುತ್ತಿಕೊಂಡಿರುವ ಮೇಘಗಳೇ ಆಗಿವೆ.

ನಿಘಂಟುವಿನಲ್ಲಿ ನೀರಿಗೆ 'ವಿಷಂ' ಎಂದೂ ಹೇಳಿದ್ದಾರೆ. ವಿಷ ಕುಡಿಯುವುದೆಂದರೆ ನೀರು ಅರ್ಥ. ಸೂರ್ಯನು ಪೃಥ್ವಿಯಿಂದ ಜಲವನ್ನು ಹೀರಿ ಕೊಳ್ಳುತ್ತಾನೆ, ಮತ್ತು ಆಕಾಶದಲ್ಲಿ ಅವುಗಳನ್ನು ಧಾರಣೆ ಮಾಡಿಕೊಳುತ್ತಾನೆ, ಈ ವಸ್ತು ಸ್ಥಿತಿಯು ಪೌರಾಣಿಕ ಕತೆಗಳ ಆಧಾರವಾಗಿದೆ. ಶಿವನು ವಿಷ ಕುಡಿದ, ಮತ್ತು ಕಂಠದಲ್ಲಿ ಧಾರಣೆ ಮಾಡಿಕೊಂಡ, ಎಂದು ಕತೆಗಾರರು ಕತೆ ಹೇಳುತ್ತಾರೆ.

ಶಿವನನ್ನು ನೀಲಕಂಠ, ನೀಲಗ್ರೀವನೆಂದೂ ಹೇಳುತ್ತಾರೆ. ಯಜುರ್ವೇದ ಭಾಷ್ಯ (ಅಧ್ಯಾಯ ೧೬, ಮಂತ್ರ ೫೬ ) ಯಲ್ಲಿ ನೀಲಗ್ರೀವಾ; ಎಂದರೆ ದ್ಯುಸ್ಥಾನಾ:, ಅರ್ಥಾತ್ ಆಕಾಶಸ್ಥಾನೀಯ ಎಂದು ಉವ್ವಟರು ವಿವರಿಸಿದ್ದಾರೆ. ಶಿವನು ನೀಲಕಂಠನೆಂದರೆ, ದ್ಯುಸ್ಥಾನೀಯನೆಂದು ಇದರಿಂದ ಸ್ಪಷ್ಟವಾಗುತ್ತದೆ. ಆದುದರಿಂದ ನೀಲಕಂಠ ಶಿವನೆಂದರೂ ಸೂರ್ಯನೇ ಆಗಿದ್ದಾನೆ. ಶಿವನ ಧವಲ ವರ್ಣವೂ ಇದೇ ಮಾತನ್ನು ಸಮರ್ಥಿಸುತ್ತದೆ.

ಇನ್ನು ಶಿವನನ್ನು ಗಂಗಾಧರ, ಚಂದ್ರಶೇಖರ, ಹರ, ಪಶುಪತಿ, ಗೌರೀವರ, ತ್ರ್ಯಂಬಕ ಎಂದು ಮುಂತಾಗಿ ಪೌರಾಣಿಕರು ವರ್ಣಿಸುತ್ತಾರೆ, ಗಂಗೆ, ಯಮುನೆ, ಸರಸ್ವತೀ ಮೊದಲಾದ ದೇವನದಿಗಳು, ನಿಜವಾಗಿ ಸೂರ್ಯನ ಕಿರಣಗಳೇ ಆಗಿವೆ. ಈ ಹೆಸರುಗಳು ಬೇರೆ ಬೇರೆ ಕಿರಣಗಳ ಲಕ್ಷಣಗಳನ್ನು ಹೇಳುತ್ತವೆ. ಈ ಕಿರಣಗಳಲ್ಲಿ ಗಂಗೆಯು ಪ್ರಮುಖವಾಗಿದೆ. ಆದುದರಿಂದ ಉಪಲಕ್ಷಣಾರ್ಥದಲ್ಲಿ ಸೂರ್ಯನನ್ನು ಗಂಗಾಧರನೆಂದು ಹೇಳಿದ್ದಾರೆ. ಸೂರ್ಯೋದಯದ ಸಮಯದಲ್ಲಿ ಕಾಣುವ ಸ್ವರ್ಣಿಯ ಕಿರಣಗಳೇ ರಾತ್ರಿಯ ದೋಷಗಳನ್ನು ದೂರಮಾಡುವ ಪಾಪನಾಶಿನಿ ಗಂಗೆ. ತನ್ನ ಸುಷುಮ್ನಾ ಎಂಬ ರಶ್ಮಿಯ ಮೂಲಕ ಸೂರ್ಯನು ಚಂದ್ರನನ್ನು ಧರಿಸಿಕೊಂಡಿದ್ದಾನೆ. ಆದುದರಿಂದಲೇ ಅವನಿಗೆ ಚಂದ್ರಶೇಖರನೆಂಬ ಹೆಸರು ಬಂತು. "ಜ್ಯೋತಿರ್ಹರ ಉಚ್ಯತೇ" (ನಿರುಕ್ತ ೪ ೧೯) ಎಂದರೆ ಪ್ರಕಾಶನನ್ನೇ ಹರ ಎಂದು ಹೇಳುತ್ತಾರೆ. ಯಾಕೆಂದರೆ ಇದು ಕತ್ತಲೆಯನ್ನು ದೂರ ಮಾಡುತ್ತದೆ. ಆದುದರಿಂದ ಈ ಮಹಾನ್ ಜ್ಯೋತಿಯಾದ ಸೂರ್ಯನನ್ನು ಹರ ಎಂದು ಹೇಳುತ್ತಾರೆ. ಸೂರ್ಯನಿಂದಲೇ ಮಳೆ, ಮಳೆಯಿಂದಲೇ ಬೆಳೆ, ಬೆಳೆಯಿಂದಲೇ ಅನ್ನ. ಅನ್ನದಿಂದಲೇ ಪಶುಗಳ ರಕ್ಷಣೆಯಾಗುತ್ತದೆ. ಈ ಕಾರಣಗಳಿಂದ ಸೂರ್ಯನನ್ನು ಪಶುಪತಿ ಎಂದು ಕರೆಯುತ್ತಾರೆ, ಗೌರಿ ಮತ್ತು ದುರ್ಗಾ ಎಂಬುವುದು ಪೃಥ್ವಿಯ ವಿಶೇಷಣಗಳು. ಪೃಥ್ವಿಯು ಸೂರ್ಯನನ್ನು ಬಿಟ್ಟು ಎಲ್ಲಿಗೂ ಹೋಗುವುದಿಲ್ಲ. ನಿತ್ಯ ಅವನ ಸುತ್ತಲೂ ತಿರುಗುತ್ತಿರುತ್ತದೆ. ಶಿವನ ಪತಿವ್ರತೆಯಾದ ಸತೀ ಗೌರಿಯ ರಹಸ್ಯ ಇದೇ. ತ್ರ್ಯಂಬಕನೆಂದರೆ ಮೂರು ಲೋಕಗಳ ಪಿತ ಅಥವಾ ಪಾಲಕನೆಂದು ಅರ್ಥ. ಆದುದರಿಂದ ತ್ರ್ಯಂಬಕನೆಂಬ ಹೆಸರು ಸೂರ್ಯನಿಗೆ ಸಾರ್ಥ

ಕವಾಗುತ್ತದೆ. ಶಿವನ ವರ್ಣನೆಯಲ್ಲಿ ಇಂತಹ ಅನೇಕ ರಹಸ್ಯಗಳು ಅಡಗಿವೆ. ಇವುಗಳನ್ನೆಲ್ಲಾ ಇಲ್ಲಿ ಸ್ಥಾನಾಭಾವದಿಂದಾಗಿ ವಿವರಿಸಲು ಸಾಧ್ಯವಿಲ್ಲ. ವಿವೇಕಿಗಳಿಗೆ ಇಷ್ಟೇ ಸಾಕು. ಶ್ರದ್ಧೆ ವಿಶ್ವಾಸ, ಭಾವನೆ ಮೊದಲಾದುವುಗಳ ಹೆಸರಲ್ಲಿ ಏನೆಲ್ಲಾ ನಾಟಕಗಳನ್ನು ಮಾಡುತ್ತಾರೆಯೋ, ಅವುಗಳಿಗೆ ಅಂತ್ಯವಿಲ್ಲ. ಅಜ್ಞಾನದಲ್ಲಿಯೇ ಅವರಿಗೆ ಆನಂದ. ಗೂಬೆಗಳಿಗೂ ಕತ್ತಲೆಯಲ್ಲಿರುವುದೇ ಇಷ್ಟವಲ್ಲವೆ ? ನಿಜವಾಗಿ ನೋಡಿದರೆ, ಪೌರಾಣಿಕ ಮೂರ್ತಿಪೂಜಕರು ಪರಮಾತ್ಮನನ್ನು, ಬಿಟ್ಟು ಬಿಟ್ಟಿದ್ದಾರೆ, ಅಲ್ಲದೆ ಮೂರ್ತಿಗಳ ರಹಸ್ಯವನ್ನೂ ಅವರು ತಿಳಿದಿಲ್ಲ, ಪೌರಾಣಿಕ ಕತೆಗಳ ತಿರುಳನ್ನು ಅವರು ಅರಿತಿಲ್ಲ. ಶಿವನ ಮೂರ್ತಿಯಲ್ಲಿ ಯೋಗದ ರಹಸ್ಯಗಳನ್ನು ಪ್ರಕಟಿಸಲಾಗಿದೆ. ಭೂಲಿಂಗ, ಜ್ಯೋತಿರ್ಲಿಂಗ, ಆಪಃ ಲಿಂಗ, ವಾಯುಲಿಂಗ ಆಕಾಶಲಿಂಗಗಳೆಂಬ ಪಂಚಲಿಂಗಳು ಪಂಚಮಹಾ ಭೂತಗಳಾಗಿವೆ. ಪ್ರಕೃತಿ ಯೋನಿಯಿಂದ ಇವುಗಳ ಉತ್ಪತ್ತಿಯನ್ನು ಶಿವಲಿಂಗಳು ತೋರಿಸುತ್ತವೆ. ಇದನ್ನು ತಿಳಿದವರೂ ವಿರಳರಾಗಿದ್ದಾರೆ.

ಅತಿ ಪ್ರಾಚೀನ ಕಾಲದಲ್ಲಿ ಶಿವನೆಂಬ ಖ್ಯಾತಿ ಪ್ರಾಪ್ತ ಋಷಿಯೊಬ್ಬರು ಹಿಮಾಚಲ ಪ್ರದೇಶದಲ್ಲಿದ್ದರು. ಇವರು ಧನುರ್ವೇದಾಚಾರ್ಯರಾಗಿದ್ದರು. ಪರುಶುರಾಮನಿಗೆ ಬಿಲ್ಲು ವಿದ್ಯೆಯನ್ನು ಇವರೇ ಕಲಿಸಿದ್ದರು. ಇವರ ಧನುಸ್ಸನ್ನು ರಾಮನು ಎತ್ತಿ ಮುರಿದಿದ್ದನು. ಪಾಣಿನಿಗೆ ಇವರು ವ್ಯಾಕರಣ ಶಾಸ್ತ್ರವನ್ನು ಕಲಿಸಿದ್ದರು. ಪ್ರತ್ಯಾಹಾರ ಸೂತ್ರಗಳ ರಚನೆ ಮಾಡಿದವರೂ ಇವರೇ. ಇವರೊಬ್ಬ ಆದ್ಯ ವಿಮಾನಾಚಾರ್ಯರೂ, ಯೋಗಾಚಾರ್ಯರೂ ಆಗಿದ್ದರು. ಇವರು ಅನೇಕ ದುಷ್ಟ ದಾನವರನ್ನು ಕೊಂದು ಸಾಧು ಸಜ್ಜನರ ರಕ್ಷಣೆ ಮಾಡಿದ್ದರು. ಈ ರೀತಿ ಅನೇಕ ಲೋಕೋಪಕಾರದ ಮಹತ್ಕಾರ್ಯಗಳನ್ನು ಮಾಡಿರುವುದರಿಂದ ಜಗದ್ರಕ್ಷಕ: ದೇವನೆಂದು ಪೂಜಿಸಲ್ಪಟ್ಟರು. ಇವರ ಚರಿತ್ರೆಯೂ ಪೌರಾಣಿಕ ಕಥಾ ಸಾಗರದಲ್ಲಿ ಮುಳುಗಿ ಹೋಗಿದೆ. ಪ್ರಯತ್ನ ಮಾಡಿದರೆ ಅದೂ ಸಿಗಬಹುದು. ಈ ರೀತಿ ವಿಭಿನ್ನ ಶಿವರ ರಹಸ್ಯವನ್ನು ತಿಳಿದು, ಅದರಿಂದ ಯಥೋಚಿತ ಲಾಭ ಪಡೆಯುವ ಸಂಕಲ್ಪ ಮಾಡಿ, ತಮ್ಮ ಹಾಗೂ ಲೋಕದ ಕಲ್ಯಾಣ ಮಾಡುವ ಭಾವನೆಯು ಜನರ ಮನಸ್ಸಿನಲ್ಲಿ ಹುಟ್ಟಿದರೆ ಮಾತ್ರ 'ಮಹಾಶಿವರಾತ್ರಿ'ಯು ಉತ್ಸವವು ಸಾರ್ಥಕವಾಗುವುದಲ್ಲದೆ, ಅರ್ಥಹೀನ ಪೂಜಾ ಪಾಠಗಳಿಂದ ಭಟ್ಟ (ಭ್ರಷ್ಟ) ಪೂಜಾರಿಗಳ ಹೊಟ್ಟೆ ತುಂಬುವುದೇ ಹೊರತು, ಬೇರೇನೂ ಪ್ರಯೋಜನವಿಲ್ಲ.

---

# ಇಸ್ಲಾಂ ಮತದ ಮೇಲೆ ಒಂದು ವಿಹಂಗಮ ದೃಷ್ಟಿ

ಲೇ- ಪ್ರೊ. ಜ್ಯೇಷ್ಠವರ್ಮನ್, ಮುಂಬಾಯಿ.

ಕಳೆದ ಸಂಚಿಕೆಯಿಂದ ಮುಂದುವರಿದುದು.

ಇತ್ತಿಕಾನ್ ೭೦, ಭಾಗ II. ಪುಟ ೩೬೬, (ತಫ್ಸೀರ್ ಕದ್ರಿಯ ಟೀಕೆ ಸಹಿತ) ಇದರಲ್ಲಿ ಹೇಳಿದಂತೆ, ಮುಹಮ್ಮದ್ ಪೈಗಂಬರನು ತನ್ನ ಬೇರೆ ಬೇರೆ ಸ್ತ್ರೀಯರೊಡನೆ ಸಹವಾಗ ಮಕ್ಕಾಗಿ ಬೇರೆ ಬೇರೆ ದಿನಗಳನ್ನು ನಿಶ್ಚಯಿಸಿದ್ದನು. ಒಂದು ದಿನ ಬೀಬೀ ಹಪ್ಸಾಳ ಬಾರಿ ಬಂತು. ಆದರೆ, ದುರ್ಭಾಗ್ಯದಿಂದ ಅವಳು ಆ ದಿನ ತನ್ನ ತವರು ಮನೆಗೆ ಹೋಗಿದ್ದಳು. ಮುಹಮ್ಮದನು ಹಪ್ಸಾಳ ಕೋಣೆಗೆ ಹೋದಾಗ ಅವಳು ಅಲ್ಲಿ ಇರದಿದ್ದರಿಂದ ಮರಿಯಾ ಕಬ್ತಿಯಾ ಎಂಬ ದಾಸಿಯೊಡನೆ ಸಮಾಗಮ ಮಾಡಿಕೊಂಡನು! ಇಂತಹ ಕಾಮುಕನಾಗಿದ್ದನು ಮುಹಮ್ಮದ್ ಪೈಗಂಬರನು! ಅವನ ಅನುಯಾಯಿಗಳು ಸಜ್ಜನರಾಗುವುದಾದರೂ ಹೇಗೆ ?

ಮಿಜಾನುಲ್ ಹಕ್ ಎಂಬ ಗ್ರಂಥದಲ್ಲಿ ಡಾ॥ ಫೌಂಡರ್, "ಯಾರೇ ಆಗಲಿ. ಕುರ್‌ಆನನ್ನು ಓದಿದವರಿಗೆ ಖಂಡಿತವಾಗಿಯೂ ಮುಹಮ್ಮದ್ ಸಾಹೇಬನು ಮಹಾ ಕಾಮುಕನಾಗಿದ್ದನೆಂಬುದು ಸ್ಪಷ್ಟವಾಗುತ್ತದೆ." ಎಂದು ಹೇಳಿದ್ದಾರೆ. ಇದೇ ರೀತಿ ಡಾ॥ ಜಾರ್ಜ್‌ಸೇಲ್ ಎಂಬ ವಿದ್ವಾಂಸರೂ, "ಹಜರತ್ ಮುಹಮ್ಮದನು ಮಹಾ ಸ್ತ್ರೀಲಂಪಟನಾಗಿದ್ದನು. ಅವನು ಎಷ್ಟು ಮಂದಿ ಸ್ತ್ರೀಯರನ್ನು ಕೆಡಿಸಿದ್ದನೆಂದು ಹೇಳುವುದು ಕಷ್ಟ. ಎಂದು ಬರೆದಿದ್ದಾರೆ.

ಇಷ್ಟು ಮಾತ್ರವಲ್ಲದೆ, "ಹಜರತ್ ಮುಹಮ್ಮದನ ಕ್ರೂರತೆ ಮತ್ತು ರಕ್ತಪಾತದಿಂದ ತುಂಬಿದ ಆಚರಣೆಯೇ ಇಸ್ಲಾಮಿನ ಮೂಲಾಧಾರ ತತ್ವವಾಗಿದೆ" (ಡಾ॥ ಎಂ. ಎಲ್ ಫಿನ್‌ಸ್ಟನ್), "ಮುಹಮ್ಮದ್ ಪೈಗಂಬರನು ವಿಶ್ವಾಸ ಘಾತಕ ಮತ್ತು ಅತ್ಯಾಚಾರಗಳನ್ನು ಮಾಡುವುದರಲ್ಲಿ ನಿಪುಣನಾಗಿದ್ದನು" (ಥೋಮಸ್ ಕಾರ್ಲ್ಲಿಲ್), ಎಂಬ ಮಾತು ಅವನ ಜೀವನ ಚರಿತ್ರೆಯಿಂದಲೇ ಸ್ಪಷ್ಟವಾಗುತ್ತದೆ.

ಮುಹಮ್ಮದ್ ಪೈಗಂಬರನು ಜೂನ್ ೮, ೬೩೨ ನೇ ಇಸವಿಯಂದು ಮೃತನಾಗಿದ್ದನು. ಅವನು ತನ್ನ ಉತ್ತರಾಧಿಕಾರಿಗಳನ್ನು ನೇಮಿಸಲಿಲ್ಲವಾದುದರಿಂದ, ಅನೇಕ ಮಂದಿ ಖಿಲಾಫತ್ತಿನ ಅಧಿಕಾರಕ್ಕಾಗಿ ಪರಸ್ಪರ ಹೋರಾಡಿದರು. ಖಲೀಫರಾದವರು ಕಾಫಿರರನ್ನು (ಮುಹಮ್ಮದ ಪೈಗಂಬರನನ್ನು ಧರ್ಮಗುರು, ಅಥವಾ ದೇವರ ಸಂದೇಶವಾಹಕನೆಂದು ನಂಬದವರನ್ನು) ಕೊಲ್ಲಬೇಕೆಂದು ಹೇಳುವ ಕುರ್‌ಆನಿನ ಆದೇಶ ಪಾಲನೆ ಗನುಸಾರವಾಗಿ ನೆರೆಯ ರಾಜ್ಯಗಳನ್ನು ಆಕ್ರಮಿಸಿ ರಕ್ತಪಾತವನ್ನು ಹಬ್ಬಿಸಿದರು. ಈ ಯುದ್ಧವನ್ನು ಮುಸಲ್ಮಾನರು ಜೆಹಾದ್ ಎಂದು ಕರೆಯುತ್ತಾರೆ.

ರಾಜ ದಾಹಿರನು ಸಿಂಧ್ ದೇಶದಲ್ಲಿ ಆಳುತ್ತಿದ್ದಾಗ, ಮೊಹಮ್ಮದ್ ಇಬ್ನು-ಎ-ಕಾಸಿಮ್ ಎಂಬವನು ಆಕ್ರಮಣ ಮಾಡಿದನು. ಆಗ ತುಂಬಾ ಮಂದಿ ಧರ್ಮಾತ್ಮಕ್ತ ಮುಸಲ್ಮಾನರು

(Muslim deserters) ಹಿಂದೂ ರಾಜನಾದ ದಾಹಿರನ ಬಳಿಗೆ ಬಂದು ಶರಣಾಗತರಾದರು. ದಾಹಿರನು ಅವರನ್ನು ನಂಬಿ ಅವರಿಗೆ ಆಶ್ರಯವನ್ನು ಕೊಟ್ಟದ್ದು ಮಾತ್ರವಲ್ಲದೆ, ಅವರನ್ನು ತನ್ನ ಸೈನ್ಯದಲ್ಲಿಯೂ ನೇಮಿಸಿದನು. ಇಂತಹ ಮೂರ್ಖತೆಯನ್ನು ನಂತರದ ಹಿಂದೂಗಳೂ ತೋರಿಸಿದ್ದಾರೆ. ದಾಹಿರನು ಆಕ್ರಮಣ ಕಾರಿಗಳು ತನ್ನ ರಾಜ್ಯದ ಸೀಮೆಯೊಳಗೆ ಬಾರದಂತೆ ಅವರನ್ನು ತಡೆಗಟ್ಟಬೇಕೆಂದು ತನ್ನ ಸೇನೆಗೆ ಆದೇಶ ಕೊಟ್ಟನು. ಆದರೆ ಅವನ ಸೇನೆಯಲ್ಲಿದ್ದ ಶರಣಾಗತರಾಗಿ ಬಂದಿದ್ದ ತ್ಯಕ್ತಧರ್ಮ ಮುಸಲ್ಮಾನರು, "ಆಕ್ರಮಣ ಕಾರಿಗಳು ಸಿಂಧ್ ರಾಜ್ಯದ ಸೀಮೆಯೊಳಗೆ ಪ್ರವೇಶ ಮಾಡಿದರೆ, ಅವರನ್ನು ಧ್ವಂಸ ಮಾಡಲು ಸುಲಭವಾಗುವುದು" ಎಂದು ದಾಹಿರನಿಗೆ ಸಲಹೆ ಕೊಟ್ಟರು. ಇದರಂತೆ, ಶತ್ರುಗಳು ದಾಹಿರನ ರಾಜ್ಯದೊಳಗೆ ಪ್ರವೇಶ ಮಾಡಿದಾಗ ಶರಣಾಗತರಾಗಿ ಬಂದು ದಾಹಿರನ ಸೇನೆಯನ್ನು ಸೇರಿದ್ದ ಮುಸಲ್ಮಾನ ಸೈನಿಕರು ಆಕ್ರಮಣಕಾರಿಗಳೊಂದಿಗೆ ಸೇರಿ ಹಿಂದೂ ಸೈನಿಕರ ಮೇಲೆಯೇ ಬಿದ್ದರು. ಈ ರೀತಿ ವಂಚನೆ ಮತ್ತು ವಿಶ್ವಾಸ ಘಾತದಿಂದ ಮುಸಲ್ಮಾನರು ಹಿಂದೂ ರಾಜದಾಹಿರನನ್ನು ಕೊಂದು ಸಿಂಧ್ ದೇಶವನ್ನು ವಶಪಡಿಸಿಕೊಂಡರು. ಆದರೂ ಸೌಭಾಗ್ಯವಶಾತ್, ಸಂಮ್ರಾ ರಾಜಪೂತರು ಈ ಆಕ್ರಮಣಕಾರಿಗಳನ್ನು ಇಲ್ಲಿ ಕಾಲೂರಲು ಬಿಡಲಿಲ್ಲ. ಆಕ್ರಮಣಕಾರಿಗಳನ್ನು ಸಂಪೂರ್ಣ ಧ್ವಂಸ ಮಾಡಿದರು. ಆದರೂ ಅನೇಕ ಮಂದಿ ಮುಸಲ್ಮಾನರು, ಫಕೀರರ ವೇಶದಲ್ಲಿದ್ದುದರಿಂದಲೂ, ಹಿಂದುಗಳಿಗೆ ಅವರ ಗುಟ್ಟು ಗೊತ್ತಿಲ್ಲದಿದ್ದುದರಿಂದಲೂ, ಬದುಕಿ ಉಳಿದರು. ಈ ಫಕೀರರು ಗುಪ್ತಚರರಾಗಿಯೂ, ವಿಧ್ವಂಸಕರಾಗಿಯೂ ಕಾರ್ಯ ಮಾಡುತ್ತಿದ್ದರು. ಮುಸಲ್ಮಾನರ ಇತಿಹಾಸವು ಇಂತಹ ಮೋಸಗಾರಿಕೆ ವಿಶ್ವಾಸಘಾತಕಾದಿಗಳಿಂದ ತುಂಬಿದೆ. ಈ ರೀತಿಯಲ್ಲಿ ಮುಸಲ್ಮಾನರು ತುರ್ಕಿಸ್ತಾನ, ಪರ್ಶಿಯಾ, ಅಫಘಾನಿಸ್ತಾನ, ಬಲೂಚಿಸ್ತಾನ, ಮೊದಲಾದ ಕಡೆಗಳಲ್ಲಿ ಮುಂದಿನ ಆಕ್ರಮಣಕ್ಕೆ ಮಾರ್ಗವನ್ನು ಪ್ರಶಸ್ತ ಮಾಡಿದರು. ವಿಕ್ರಮ ಸಂವತ್ಸರ ೧೨೫೦ ರ ಸುಮಾರಿಗೆ ದಾಸಕುಲದಲ್ಲಿ ಹುಟ್ಟಿದ ಕುತುಬುದ್ದೀನ್ ಐಬಕನಿಂದ ಹಿಡಿದು ಖಿಲ್ಜಿ, ತುಗಲಕ್, ಸಯ್ಯದ್, ಲೋಧಿ, ಸೂರ್, ಮತ್ತು ಕೊನೆಗೆ ಮೊಗಲ ವಂಶದವರು ಭಾರತದಲ್ಲಿ ರಾಜ್ಯವಾಳಿದರು. ಡಿಲ್ಲಿಯಲ್ಲಿ ಮುಸಲ್ಮಾನರ ರಾಜ್ಯವು ಬಹಾದ್ದೂರ್‌ಶಾಹ ಜಫರನೊಂದಿಗೆ ವಿಕ್ರಮ ಸಂವತ್ಸರ ೧೯೧೪ ರಲ್ಲಿ ಸಮಾಪ್ತವಾಯಿತು. ಇದು ಇಸ್ಲಾಮಿನ ಸಂಕ್ಷಿಪ್ತ ಪರಿಚಯವಾಗಿದೆ.

ಇಸ್ಲಾಮಿನ ಕೆಲವು ಆಧುನಿಕ ವಿದ್ವಾಂಸರು ಕುರ್‌ಆನಿನ ವಾಕ್ಯಗಳನ್ನು ತರ್ಕ ಸಂಗತವಾಗಿಯೂ ವೈಜ್ಞಾನಿಕವಾಗಿಯೂ ತೋರುವಂತೆಯೂ ಭಾಷ್ಯ ಬರೆಯಲಾರಂಭಿಸಿದ್ದಾರೆ. ಆದರೆ ಈ ಭಾಷ್ಯಗಳು ಇಷ್ಟರ ತನಕ ಪ್ರಚಾರದಲ್ಲಿದ್ದ ಭಾಷ್ಯಗಳಿಂದ ಅತಿ ಭಿನ್ನವಾಗಿವೆ. ಉದಾಹರಣೆಗಾಗಿ ಇಷ್ಟರ ತನಕ, ಹಜರತ್ ನಬಿ (ಮುಹಮ್ಮದ್ ಪೈಗಂಬರ) ಯ ಬಳಿಗೆ ದೇವ ದೂತರು ಬರುತ್ತಿದ್ದರು ಮತ್ತು ಆಗಾಗ ಅವನಿಗೆ ಕುರ್‌ಆನಿನ ವಾಕ್ಯಗಳನ್ನು ಪ್ರಕಟಿಸುತ್ತಿದ್ದರೆಂದು ನಂಬಲಾಗುತ್ತಿತ್ತು. ಈ ರೀತಿಯ ವ್ಯಾಖ್ಯೆಗಳು ಈಗ ಬದಲಾಗುತ್ತಿವೆ. ಮತ್ತು ಹಜರತ್ ರಸೂಲ್ ಇಲ್ಲಾಹನು ಸಮಾಧಿಸ್ಥನಾಗಿ ಕುಳಿತಾಗ ದೇವರ ಪ್ರೇರಣೆಯಿಂದ ಕುರ್‌ಆನಿನ ವಾಕ್ಯಗಳು ಪ್ರಕಟವಾದುವು ಎಂದು ಹೇಳುತ್ತಾರೆ. ಇದು ಇಸ್ಲಾಮಿನ ವಿದ್ವಾಂಸರ

ಮೇಲೆ ಬಿದ್ದ ವೈದಿಕ ಸಾಹಿತ್ಯಗಳ ಪ್ರಭಾವದ ಪರಿಣಾಮ.

(Based on A Glimpse of Islam, by Shri R. D. Sharma, Masurashram Patrika, January 1981.)

---

# ಮೋಕ್ಷಪ್ರಾಪ್ತಿಯ ಪಿಪಾಸೆ

**ಕದಾ ಮೃಡೀಕಂ ಸುಮನಾ ಅಭಿಖ್ಯಂ** || ಋಗ್ ೭/೮೬/೨ ||

ಹೇ ಪ್ರಭೋ! ನಿರ್ಮಲ ಹಾಗೂ ಪವಿತ್ರ ಮನಸ್ಸಿನವನಾಗಿ ಸಚ್ಚಿದಾನಂದನಾದ ನಿನ್ನನ್ನು ನಾನು ಯಾವಾಗ ನೋಡುವೆನು ? ಯಾವಾಗ ಸರ್ವದೇವಗಣವರಣೀಯನೂ. ಮಂಗಳಮಯನೂ ಆದ ವರುಣ ದೇವನಲ್ಲಿ ಅಂತರ್ಭೂತನಾಗಿ ತಾದಾತ್ಮ್ಯವನ್ನು ಹೊಂದುವೆನು ? ಹೇ ಇಂದ್ರನೇ! ನಿನ್ನ ಕೃಪೆಯಿಂದ ನನ್ನ ದರ್ಶನಾಭಿಲಾಷೆ ಪೂರ್ಣವಾಗಲಿ.

ಅಂತರಾತ್ಮನಲ್ಲಿ ಪ್ರಭುದರ್ಶನ ಲಾಲಸೆಯನ್ನು ಹೊತ್ತು ಕೊಂಡ ಮಾನವರು ಅದೆಷ್ಟು ಸೌಭಾಗ್ಯ ಶಾಲಿಗಳಾಗಿರುವರು ? ಸಾಧಾರಣ ಸಾಂಸಾರಿಕ ಜೀವನವನ್ನು ತೊರೆದು, ಒಬ್ಬ ಸಾಧಕನ ಜೀವನವನ್ನಪ್ಪಿಕೊಳ್ಳುವುದು ಸಾಮಾನ್ಯ ವ್ಯಕ್ತಿಯ ಕೆಲಸವಲ್ಲ.

ಸತ್ಯದ ಪಿಪಾಸೆಯನ್ನುಳ್ಳ ಮಾನವರು ಧನ್ಯರು. ಕೋಟ್ಯಂತರ ಜನರು ಈ ಪೃಥ್ವಿಯಲ್ಲಿ ಜನ್ಮ ತಾಳಿದರೂ ಸಹ ಸತ್ಯದ ಪಿ ಪಾಸಾಕುಲರು ಬಹಳ ಕಡಿಮೆ ಜನರಿದ್ದಾರೆ. ಸತ್ಯ ಪ್ರಾಪ್ತಿಯು ಅವರ ಪ್ರಾಣ ಸರ್ವಸ್ವವಾಗಿರುತ್ತದೆ. ಮಹಾತ್ಮಾ ಬುದ್ಧದೇವ, ಮಹರ್ಷಿ ದಯಾನಂದ, ಗುರುನಾನಕ, ಸ್ವಾಮೀ ಶ್ರದ್ಧಾನಂದ, ಸ್ವಾಮೀ ರಾಮಕೃಷ್ಣ ಪರಮಹಂಸ ಮತ್ತು ಸ್ವಾಮೀ ವಿವೇಕಾನಂದ ಮೊದಲಾದವರು ಸತ್ಯ ಪ್ರಾಪ್ತಿಗಾಗಿ ಹೆಣಗಿದರು, ಅದನ್ನೇ ತಮ್ಮ ಜೀವ ಜೀವಾಳವೆಂದು ತಿಳಿದರು. ಸತ್ಯದ ಪ್ರಾಪ್ತಿಯಾಯಿತೆಂದರೆ ಪರಮ ಸೌಭಾಗ್ಯವೆನ್ನಬೇಕು. ಅದಾಗದೆ ಸತ್ಯ ಪ್ರಾಪ್ತಿಗಾಗಿ ಅಮಿತ ಇಚ್ಛೆಯುಂಟಾಗುವುದೂ ಕಡಿಮೆ ಸೌಭಾಗ್ಯದ ವಿಷಯವಲ್ಲ. ಸತ್ಯಕ್ಕಾಗಿ ಪ್ರಯಾಸ ಮಾಡುವುದು, ಪರಿಶ್ರಮಿಸಿ, ಸಂಕಲ್ಪವಂತನಾಗಿ ನಮ್ಮಿಂದಾದಷ್ಟು ಅದಕ್ಕಾಗಿ ಪ್ರಯತ್ನ ಮಾಡಿಯೂ ಅದು ಸಿದ್ಧಿಸಲಿಲ್ಲವಾದರೆ ಪರಿತಪಿಸಬೇಕಾಗಿಲ್ಲ. ಆದರೆ ಸತ್ಯವನ್ನು ಪಡೆಯಲು ಪಿಪಾಸೆಯೇ ನಮ್ಮಲ್ಲಿ ಹುಟ್ಟಿಲ್ಲವೆಂದರೆ ನಮ್ಮ ಜೀವನವು ಹೇಯವಾಗಿ ಬಿಡುವುದು.

ನಮ್ಮೊಳಗೆ ಸತ್ಯಪ್ರಾಪ್ತಿಗಾಗಿ ಲಾಲಸೆಯುಂಟಾಗುವುದು, ಸತ್ಯದ ಪ್ರಾಪ್ತಿಗಿಂತ ಹೆಚ್ಚಾಗಿದೆ. ಆ ಪಿಪಾಸೆ ಲಾಲಸೆ ಆ ವಿರಾಟ್ ಸ್ವರೂಪನಾದ ಆನಂದ ನಿಧಾನನಾದ ಭಗವಂತ

ನನ್ನು ಪಡೆಯಲಿಕ್ಕಾಗಿ ಉಂಟಾಗಬೇಕೇ ಹೊರತು ಕ್ಷುದ್ರ–ಜಡ ವಸ್ತುವನ್ನು ಪಡೆಯಲಿಕ್ಕಾಗಿಯಲ್ಲ. ಏಕೆಂದರೆ ಕ್ಷುದ್ರ ಪ್ರಾಪ್ತಿಯಾದ ಮೇಲೆಯೂ ಸಹ ಜೀವನದಲ್ಲಿ ಶಾಂತಿ ಆನಂದಗಳು ನೆಲೆಯೂರಲಾರವು. ವಿರಾಟ್ ಪರಮಾತ್ಮನ ಪ್ರಾಪ್ತಿಯಲ್ಲಿ ಅಸಫಲತೆಯೊದಗಿದರೂ ಸಹ ಪ್ರಾಪ್ತಿಯ ಪಿಪಾಸೆಯಿಂದಾಗಿ ಅವನ ಜೀವನವು ಆಶೆ ಉತ್ಸಾಹ ಶಾಂತಿಗಳಿಂದ ಪರಿಪೂರ್ಣವಾಗಿ ಬಿಡುವುದು.

ನಾವು ಆ ಮಹಾನ್ ಸತ್ಯದ ಪ್ರಾಪ್ತಿಗಾಗಿ ಇಚ್ಛಿಸಿದಾಗಲೇ ನಮ್ಮೊಳಗೆ ಶ್ರೇಷ್ಠವಾದೊಂದು ಬೀಜವು ಅಂಕುರಿಸ ತೊಡಗುತ್ತದೆ. ಪರಮಾತ್ಮ ಅಥವಾ ಸತ್ಯವು ನಮಗೆ ಹೊರಗೆ ಸಿಗದೆ ಒಳಗೆಯೇ ಸಿಗಬಲ್ಲದು. ಅದರ ಬೀಜವು ನಮ್ಮೊಳಗೇ ನಿಹಿತವಾಗಿದೆ. ಅದನ್ನು ವಿಕಸಿತಗೊಳಿಸಬೇಕಾದಲ್ಲಿ ನಾವು ನಮ್ಮ ಪಿಪಾಸೆಯ ಅಗ್ನಿಯನ್ನು, ಜ್ಯೋತಿಯನ್ನು ಪ್ರಜ್ವಲಿಸಬೇಕು. ಆದುದರಿಂದಲೇ ವೇದದಲ್ಲಿ ಹೇಳಿದೆ.

**ಶುದ್ಧಾಃ ಪೂತಾ ಭವತ ಯಜ್ಞಿಯಾಸಃ ||**

ಶುದ್ಧ ಮತ್ತು ಪವಿತ್ರವಾದ ವಿಚಾರಗಳನ್ನೂ ಕರ್ಮಗಳನ್ನೂ ಉಳ್ಳವರಾಗಿರಿ. ನಮ್ಮೊಳಗೆ ಎಷ್ಟೊಂದು ಶ್ರೇಷ್ಠ ಅಭಿಲಾಷೆಯಿರುವುದೋ ಅಷ್ಟೇ ಒಳಗಿನ ಬೀಜಗಳಲ್ಲಿ ಸ್ಪಂದನವುಂಟಾಗಿ ಅವು ಅಂಕುರಿಸ ತೊಡಗುತ್ತವೆ. ಇದು ನಮ್ಮೊಳಗೆ ವಿರಾಟ್ ಸ್ವರೂಪವನ್ನು ಪರಮ ಸತ್ಯವನ್ನು ಪಡೆಯುವ ಸಂಕಲ್ಪ ಸ್ಥಿರಪಟ್ಟಾಗಲೇ ಮೊಳಕೆಗಳೇಳಲನುವಾಗುತ್ತವೆ. ಪರಮ ಸತ್ಯದ ಆಕಾಂಕ್ಷೆ ಜಾಗೃತವಾದಾಗ ಒಳಗಿಂದೊಳಗೇ ಸ್ವಲ್ಪ ಉತ್ಸುಕತೆ ಹಾಗೂ ಮಹತ್ತ್ವಪೂರ್ಣ ಆಂದೋಳನ ವೇಳುತ್ತದೆ. ಈ ಆಂದೋಳನವನ್ನು ಕಾಪಾಡಿ ಇಡಬೇಕು. ಬೀಜ ಅಂಕುರಿಸಿತೆಂದರೆ ಕೆಲಸ ಮುಗಿಯಲಿಲ್ಲ. ಆ ಮೊಳಕೆಗಳು ಬೆಳೆಯುತ್ತಲೂ ಇರುವಂತೆ ಎಚ್ಚರಿಕೆಯಿಂದಿರಬೇಕು.

ಭೂಮಿಯ ಮೇಲೆ ಎಷ್ಟೋ ಬೀಜಗಳು ಅಂಕುರಿಸತೊಡಗಿದರೂ ಅವುಗಳ ಪೈಕಿ ಬಹಳ ಕಡಿಮೆ ಬೀಜಗಳೇ ಮರವಾಗಿ ಬೆಳೆಯುತ್ತವೆ. ಎಲ್ಲದರಲ್ಲಿ ಕೋಟ್ಯಂತರ ಬೀಜಗಳನ್ನುಂಟು ಮಾಡುವ, ಮರವಾಗುವ ಸಾಮರ್ಥ್ಯವಿತ್ತು. ಚಿಕ್ಕದಾದೊಂದು ಬೀಜದಲ್ಲಿ ಇಡೀ ಕಾಡನ್ನೇ ಬೆಳೆಸುವ ಇಡೀ ಭೂಮಿಯಲ್ಲಿ ಮರಗಳನ್ನು ಬೆಳೆಯುವ ಶಕ್ತಿಯಿರುವುದಾದರೂ ಸಹ ಸಂರಕ್ಷಣದ ಅಭಾವದಿಂದಾಗಿ ಇಷ್ಟೆಲ್ಲ ಶಕ್ತಿಯನ್ನುಳ್ಳ ಆ ಬೀಜ ತಾನಾಗಿ ನಾಶವಾಗಿ ಬಿಡುತ್ತದೆ.

ಚಿಕ್ಕದಾದೊಂದು ಬೀಜದಲ್ಲಿ ಇಷ್ಟೆಲ್ಲ ಶಕ್ತಿಯಿರುವಾಗ ಇಷ್ಟು ಮಹಾನ್ ಮಾನವನಲ್ಲಿ ಅಂತಹ ಸಾಮರ್ಥ್ಯವಿರುವುದಿಲ್ಲವೆ ? ಅದಕ್ಕಿಂತಲೂ ಹೆಚ್ಚಾದ ಶಕ್ತಿ ಇವನಲ್ಲಿ ಅಡಗಿಕೊಂಡಿದೆ. ಚಿಕ್ಕದೊಂದು ಕಲ್ಲಿನ ಪರಮಾಣುಗಳನ್ನು ವಿಸ್ಫೋಟಗೈದಲ್ಲಿ ಬಹಳ ಹೆಚ್ಚು ಊರ್ಜಾ ಉಂಟಾಗುತ್ತದೆ. ಬಹಳ ಹೆಚ್ಚು ಶಕ್ತಿ ಜನ್ಮ ತಾಳುತ್ತದೆ. ಮಾನವನ ಚೇತನೆಯ ಅಣು ವಿಕಸಿತವಾಗಿ,

ಅದು ವಿಸ್ಫೋಟಗೊಂಡು ಆದರಿಂದುಂಟಾದ ಊರ್ಜಾದಿಂದ ಸಚ್ಚಿದಾನಂದ ಪರಮೇಶ್ವರ ನನ್ನು ಪ್ರತ್ಯಕ್ಷಗೊಳಿಸಿ ದಿವ್ಯಾನಂದದ ಅನುಭೂತಿಯನ್ನು ನೀವು ಮಾಡಲಾರಿರೆ ? ನಿಮ್ಮ ಜೀವನವು ಆನಂದದಿಂದ, ಶಾಂತಿಯಿಂದ ಪರಿಪ್ಲಾವಿತರಾಗಲಾರದೆ? ಅವಶ್ಯ ಆಗಬಲ್ಲುದು.

ಆದರೆ, ಇದು ಬರಿಯ ಉತ್ಸುಕತೆಯಿಂದಾಗದು. ಉತ್ಸುಕತೆಯಿದ್ದ ಮಾತ್ರಕ್ಕೆ ಸಾಧ ನೆಯಲ್ಲಿ ಪ್ರವೇಶ ದೊರೆಯದು. ಬರಿಯ ಉತ್ಸು ಕತೆಯಲ್ಲ ಮುಮುಕ್ಷಾ ಅಂದರೆ ಗಹನ ಪಿಪಾಸೆ ಆವಶ್ಯಕವಾಗಿದೆ. ಆ ಗಹನ ಪಿಪಾಸೆ ಹೇಗುಂಟಾಗ ಬಲ್ಲುದು ?

ನೀವು ಉಷ್ಣ ಕಾಲದಲ್ಲಿ ಮರುಭೂಮಿಯಲ್ಲಿ ನೀರನ್ನರಸುತ್ತಿದ್ದು ಎಲ್ಲಿಯೂ ನೀರು ಸಿಗದೆ ಬಾಯಾರಿ ಪ್ರಾಣ ಹೋಗುತ್ತದೋ ಎಂಬ ಸಂಶಯವೊದಗಿದಾಗ ಯಾರಾದರೂ ಬಂದು ನೀರನ್ನೇನೋ ನಾವು ಕೊಡುತ್ತೇವೆ ಆದರ ಬದಲಾಗಿ ನಿಮ್ಮ ಪ್ರಾಣ ತೆಗೆದುಕೊಳ್ಳು ತ್ತೇವೆಂದು ಹೇಳಿದ್ದರೂ ಕೂಡ ನೀವು ನೀರು ತೆಗೆದುಕೊಳ್ಳಲು ಸಿದ್ಧರಾಗುವಿರಲ್ಲವೆ ? ಸಾಯುವುದಂತೂ ಖಂಡಿತವಾಗಿರುವಾಗ ಬಾಯಾರಿ ಏಕೆ ಸಾಯಬೇಕು ? ನೀರು ಕುಡಿದು ತೃಪ್ತರಾಗಿ ಸಾಯೋಣ ಎನ್ನುವಿರಿ.

ಇಷ್ಟೊಂದು ಪಿಪಾಸೆಯು ನಿಮ್ಮಲ್ಲಿ ಸತ್ಯವನ್ನು ಪಡೆಯಲು ಮೂಡಿಕೊಂಡಲ್ಲಿ ಆ ತೀವ್ರ ಪಿಪಾಸೆಯಿಂದಾಗಿ ಎಷ್ಟೊಂದು ಒತ್ತಾಟ ಆ ಬೀಜದ ಮೇಲೆ ಬೀಳುವುದೆಂದರೆ ಅದರ ಅತ್ಯಂತ ಗಟ್ಟಿಯಾದ ಮುಚ್ಚಳವೂ ಉದುರಿ ಬಿದ್ದು ಅಂಕುರವು ವಿಕಾಸಗೊಳ್ಳತೊಡಗು ವುದು. ಬರಿಯ ಉತ್ಸುಕತೆಯಿಂದ ಈ ಕಾರ್ಯ ಆಗಲಾರದು.

ಇನ್ನು ನಾವು ಆತ್ಮನಿರೀಕ್ಷಣೆ ಮಾಡಿ ಇಂತ ಗಹನ ಪಿಪಾಸೆ ನಮ್ಮಲ್ಲಿ ಮೂಡಿದೆಯೇ ? ಪರಮಾತ್ಮನನ್ನು ಪಡೆಯುವ ಪರಮ ಸತ್ಯವನ್ನು ಅನ್ವೇಷಿಸುವ ಹಂಬಲ ನಮ್ಮಲ್ಲಿದೆಯೇ ? ಎಂಬುದನ್ನು ನೋಡೋಣ. ಅದಿಲ್ಲದಿದ್ದಲ್ಲಿ ಏನೊಂದೂ ಕಾರ್ಯ ಸಿದ್ಧಿಸದು. ಅದಿಲ್ಲದಿದ್ದಲ್ಲಿ ಪ್ರಯತ್ನ ಪಟ್ಟರೂ ಸಹ ನಿಷ್ಪ್ರಾಣ ಕರ್ತನಂತೆ ಅಸಫಲತೆಯೇ ನಮ್ಮ ಪಾಲಿಗೆ ಬರುವುದು. ಸಾಧನೆಯ ದೋಷವಲ್ಲ ಅದು, ಸ್ಪಷ್ಟವಾಗಿಯೂ ನಿಮ್ಮ ದೋಷವಾಗಿದೆ. ಏಕೆಂದರೆ ಪೂರ್ಣ ನಾದ ಪ್ರಭುವಿನ ಸೃಷ್ಟಿಯೂ ಪೂರ್ಣವಾಗಿದ್ದು, ಸೃಷ್ಟಿಯ ನಿಯಮಗಳೂ ಪೂರ್ಣವಾಗಿವೆ. ಆದುದರಿಂದ ನಿರಂತರ ಪೂರ್ಣ ಪ್ರಯತ್ನಗಳಿಂದಲೇ ಪಿಪಾಸೆ ಹುಟ್ಟುವುದು. ಆಗಲೇ ಸತ್ಯದ ಉಪಲಬ್ಧಿಯ ಕದ ತೆರೆಯಲ್ಪಡುವುದು.

ಮಹಾತ್ಮಾ ಬುದ್ಧದೇವರು ಮೋಕ್ಷೋಪದೇಶ ಮಾಡಲಿಕ್ಕಾಗಿ ಒಂದು ಊರಿಗೆ ತೆರ ಳಿದರು. ಒಬ್ಬನು ಅವರ ಸಮೀಪ ಬಂದು ಕೇಳಿದನು- "ಎಲ್ಲರೂ ಮೋಕ್ಷವನ್ನು ಪಡೆಯ ಬಲ್ಲರೆಂದು ನೀವು ಪ್ರತಿದಿನ ಉಪದೇಶಿಸುತ್ತಿರುವಿರಾದರೂ ಅವರೇಕೆ ಮೋಕ್ಷಗಾಮಿಯಾಗು ವುದಿಲ್ಲ ?" "ಪ್ರಿಯಮಿತ್ರ ! ಮೊದಲು ನೀನು ಇಡೀ ಊರನ್ನು ಸುತ್ತಿ ಅವರು ಏನನ್ನು ಪಡೆಯಬಯಸುತ್ತಾರೆಂಬುವನ್ನು ಕೇಳಿಕೊಂಡು ಬಾ" ಎಂದು ಬುದ್ಧದೇವರು ಅವನಿಗೆ ಅಪ್ಪಣೆಯಿತ್ತರು.

ಆ ಮನುಷ್ಯನು ಸಾಯಂಕಾಲ ಹೋಗಿ ಊರಿನ ಎಲ್ಲ ಜನರನ್ನು ಪ್ರಶ್ನಿಸಿ ಯಾರು ಯಾರು ಏನೆಲ್ಲ ವಸ್ತುವನ್ನು ಪಡೆಯಬಯಸುತ್ತಾನೆಂದು ತಿಳಿದು ಮಹಾತ್ಮರ ಹತ್ತಿರ ಬಂದನು. ಮಹಾತ್ಮಾ ಬುದ್ಧರು ಕೇಳಿದರು– "ಎಷ್ಟು ಮಂದಿ ಮೋಕ್ಷವನ್ನು ಪಡೆಯ ಬಯಸುತ್ತಾರೆ ?" ಆ ಮನುಷ್ಯ ಬಹಳ ನಾಚಿಕೆ ಪಟ್ಟು ಉತ್ತರವಿತ್ತನು– "ಒಬ್ಬನೂ ಸಹ ಮೋಕ್ಷವನ್ನು ಪಡೆಯ ಬಯಸಲಿಲ್ಲ." ಬುದ್ಧದೇವ ಹೇಳಿದರು. ಪ್ರತಿಯೊಬ್ಬನೂ ಮೋಕ್ಷವನ್ನು ಪಡೆಯಬಲ್ಲ. ಆದರೆ ಪಡೆಯುವ ಇಚ್ಛೆಯಾಗ ಬೇಕಲ್ಲವೆ ? ಮೋಕ್ಷ ಪ್ರಾಪ್ತಿಯ ಸಾಮರ್ಥ್ಯ ಮತ್ತು ಅದರ ಆಕಾಂಕ್ಷೆ ಇವೆರಡೂ ಬೇರೆ ಬೇರೆ ವಸ್ತುಗಳಾಗಿವೆ."

ನೀವು ನಿಜವಾಗಿಯೂ ಪರಮ ಸತ್ಯವನ್ನು ಪಡೆಯಲಿಚ್ಛಿಸಿದಲ್ಲಿ ಜಗತ್ತಿನಲ್ಲಿ ನಿಮಗೆ ಯಾರೂ ಮೋಕ್ಷವನ್ನು ಕೊಡಿಸಲಾರರು. ಸತ್ಯವನ್ನು ಪಡೆಯುವ ಮತ್ತು ಜೀವನವನ್ನು ಉನ್ನತಗೊಳಿಸುವ ಪ್ರಥಮ ಸೂತ್ರವೇ ಗಹನ ಪಿಪಾಸೆ ಮತ್ತು ನಿಜವಾದ ಉತ್ಸುಕತೆಯಾಗಿವೆ. ಇವೇ ಸಾಧನಾ ಮಾರ್ಗದಲ್ಲಿ ಮುಂದುವರಿಯಲು ಮಾರ್ಗವನ್ನು ಪ್ರಶಸ್ತಗೊಳಿಸುತ್ತವೆ.

ಭಗವಂತ! ನಮ್ಮೆಲ್ಲರಲ್ಲಿ ಆ ಪಿಪಾಸೆಯುಂಟಾಗಲಿ, ಅಮಿತ ಉತ್ಸುಕತೆ ಜನ್ಮತಾಳಲಿ ಮಹರ್ಷಿ ದಯಾನಂದರಂತೆ ನಾವೂ ಸಹ ನಿಜವಾದ ಶಿವನನ್ನು ಪಡೆಯಲು ಸಮರ್ಥರಾಗೋಣ.

**ಆಚಾರ್ಯ ಸುಭಾಷಚಂದ್ರ ಶಾಸ್ತ್ರೀ**

# ಸಮಗ್ರಕ್ರಾಂತಿ ಮತ್ತು ಸ್ವಾಮೀ ದಯಾನಂದರು

**(ಶ್ರೀಮತೀ ಮಾಧುರೀ ಮಘೋಕ)**

ಭಾರತದಲ್ಲಿ ಬೇರೆ ಬೇರೆ ಕಾಲಗಳಲ್ಲಿ ಅನೇಕ ಮಹಾಪುರುಷರು ಜನ್ಮವೆತ್ತಿ ತಮ್ಮ ವಿಚಾರಗಳಿಂದಲೂ, ಕಾರ್ಯಗಳಿಂದಲೂ ದೇಶ ಹಾಗೂ ಸಮಾಜಕ್ಕೆ ಹೊಸ ದಾರಿ ತೋರಿಸಿ ಉನ್ನತಿಯತ್ತ ಸಾಗಿಸಿದ್ದಾರೆ. ವರ್ತಮಾನ ಯುಗದ ಅಂತಹ ಮಹಾಪುರುಷರಲ್ಲಿ ಮಹರ್ಷಿ ಸ್ವಾಮೀ ದಯಾನಂದರು ಅಗ್ರಗಣ್ಯರಾಗಿರುವರು.

ಪಂಜಾಬ ಮತ್ತು ಸಿಂಧ ಪ್ರಾಂತವನ್ನುಳಿದು ಭಾರತದ ಎಲ್ಲಾ ಪ್ರದೇಶಗಳಲ್ಲಿ ಇಂಗ್ಲೀಷರು ಅಧಿಕಾರ ಪಡಿಸಿಕೊಂಡಿರುವಾಗ ಸ್ವಾಮೀಜೀ ಜನ್ಮವೆತ್ತಿದರು. ಛತ್ರಪತಿ ಶಿವಾಜಿ ಹಾಗೂ ಛತ್ರಸಾಲರ ಹಿಂದೂ ರಾಜ್ಯಸ್ಥಾಪನೆಯ ಸ್ವಪ್ನವು ಸಾಕಾರವಾಗುವ ಮೊದಲೇ ಭಂಗವಾಗಿ ವಿದೇಶೀಯ ಮುಗಲರ ಸ್ಥಾನವನ್ನು ವಿದೇಶೀಯ ಇಂಗ್ಲೀಷರು ಆಕ್ರಮಿಸಿದ್ದರು. ಹಿಂದುಗಳು ಆಗ ಹತಪ್ರಭರೂ, ಹತೋತ್ಸಾಹಿಗಳೂ, ಅಸಂಘಟಿತರಾಗಿದ್ದು ಆಂತರಿಕ ದೌರ್ಬಲ್ಯವು ಅವರನ್ನು ಹುಳ ತಿಂದ ಕಟ್ಟಿಗೆಯಂತೆ ಒಳಗಿಂದೊಳಗೇ ತಿಂದು ಹಾಕುತ್ತಿತ್ತು. ಅವರ ಈ ದೌರ್ಬಲ್ಯದಿಂದ ಮುಸಲ್ಮಾನರೂ, ಕ್ರೈಸ್ತರೂ ಲಾಭ ಹೊಂದಿ ದಾರಿ ತಪ್ಪಿ ದಿಕ್ಕು ಕೆಟ್ಟ ಹಿಂದುಗಳನ್ನು ತಮ್ಮ ಬಲೆಗಳಲ್ಲಿ ಸಿಲುಕಿಸಲು ಪ್ರಯತ್ನಶೀಲರಾಗಿದ್ದರು.

ಕಿ.ಶ. 1857ರಲ್ಲಿ ಉತ್ತರ ಭಾರತದ ಕೆಲವು ಮುಖಂಡರು ಇಂಗ್ಲೀಷ್ ರಾಜ್ಯವನ್ನು ಕೊನೆಗೊಳಿಸಲಿಕ್ಕಾಗಿ ಸೈನ್ಯ ಸಹಾಯ ಪಡೆದು ಸಂಘರ್ಷವನ್ನು ಪ್ರಾರಂಭಿಸಿದಾಗ ಸ್ವಾಮೀ ದಯಾನಂದರು ಅವರಿಗೆ ಸಕ್ರಿಯ ಸಹಾಯವನ್ನಿತ್ತರು. ಸ್ವಾಮೀ ದಯಾನಂದರೂ ಅವರ ಗುರುಗಳಾದ ದಂಡೀ ಸ್ವಾಮೀ ವಿರಜಾನಂದರೂ ಆ ಸ್ವಾತಂತ್ರ್ಯ ಸಂಘರ್ಷದಲ್ಲಿ ಮಹತ್ತ್ವಪೂರ್ಣ ಪಾತ್ರ ವಹಿಸಿದ್ದರೆಂಬುದು ಈಗ ದಿನದಿಂದ ದಿನಕ್ಕೆ ಸ್ಪಷ್ಟವಾಗುತ್ತಿದೆ. ಈ ಸಂಘರ್ಷದಲ್ಲಿ ಮೊಟ್ಟ ಮೊದಲು ಕೆಲ ಮುಸ್ಲಿಂ ಮುಖಂಡರು ಸಹಯೋಗವಿತ್ತು ಆಮೇಲೆ ಬೇಗನೇ ಆ ಸಹಯೋಗವನ್ನು ಹಿಂದಕ್ಕೆಳೆದರು. ಬರೇ ನಾನಾ ಪೇಶ್ವಾ, ತಾಂತ್ಯಾ ಟೋಪೆ, ಝಾಂಸಿಯ ರಾಣಿ ಲಕ್ಷ್ಮೀಬಾಯಿ ಹಾಗೂ ಬಿಹಾರದ ರಾಜಾಕುಂವರ ಸಿಂಹರಂತಹ ಹಿಂದೂ ನೇತಾರರು ತಮ್ಮ ಜೀವನದ ಕೊನೆಯುಸಿರಿನ ವರೆಗೆ ಕಾದಾಡಿದರು.

1857ರ ಪ್ರಯತ್ನದ ವಿಫಲತೆ ಮತ್ತು ಆಮೇಲೆ ಇಂಗ್ಲೀಷರ ಮೂಲಕ ನಡೆಸಿದ ದಮನಚಕ್ರ ಹಾಗೂ ಮುಸಲ್ಮಾನರೊಡಗೂಡಿ ಹಿಂದುಗಳನ್ನು ಅವನತಿಯತ್ತ ತಳ್ಳುವ ನೀತಿಯು ಹಿಂದೂ ಸಮಾಜವನ್ನು ನಿರಾಶೆಗೊಳಿಸಿತು. ಆದರಲ್ಲಿ ಪೂರ್ಣವಾಗಿ ಹೀನಭಾವನೆ ತಳವೂರಿತು. ಮೆಕಾಲೇಯ ಮೂಲಕ ಹೊರಿಸಲ್ಪಟ್ಟ ಇಂಗ್ಲಿಷ್ ಶಿಕ್ಷಣ ವ್ಯವಸ್ಥೆಯಿಂದಾಗಿ ಅದು ಮಾನಸಿಕ ದಾಸ್ಯಶೃಂಖಲೆಯಲ್ಲಿ ಕಟ್ಟಲ್ಪಡಲು ಮೊದಲಾಯಿತು. ತನ್ನ ಗೌರವ ಪೂರ್ಣ ಅತೀತವನ್ನು ವಿಸ್ಮರಿಸಿ ಇಂಗ್ಲೀಷರ ಮಾನಸ ಪುತ್ರರಾಗುವುದನ್ನೇ ತನ್ನ ಜೀವನದ ಸಾರ್ಥಕತೆ ಯೆನ್ನತೊಡಗಿತು.

ಈ ನಿರಾಶಾಜನಕ ಹಾಗೂ ಅಂಧಕಾರಮಯ ಪರಿಸ್ಥಿತಿಯಲ್ಲಿ ಮಹರ್ಷಿ ದಯಾನಂದರು ಸಮಾಜದಲ್ಲಿ ನವಜಾಗೃತಿಯನ್ನು ತರುವ ಮಹಾ ಪ್ರಯತ್ನ ಮಾಡತೊಡಗಿದರು. ಅವರು ರಾಷ್ಟ್ರೀಯ ಜೀವನದ ಪ್ರತಿಯೊಂದು ಪಕ್ಷದತ್ತವೂ ಗಮನ ಹೊರಳಿಸಿದರು, ಪ್ರತಿಯೊಂದು ವಿಧವಾದ ಕುರೀತಿಯನ್ನೂ ದೂರೀಕರಿಸಲಿಕ್ಕಾಗಿ ಸಮಾಜ ಮತ್ತು ರಾಷ್ಟ್ರದ ಸರ್ವಾಂಗೀಣ ಉನ್ನತಿ ಹಾಗೂ ನವನಿರ್ಮಾಣ ಮಾಡಲು ಒಂದು ಸುವಿಚಾರಿತ ಕಾರ್ಯಕ್ರಮವನ್ನು ಎದುರಿಗಿಟ್ಟರು. ಆ ಕಾರ್ಯಕ್ರಮವು ಆಧುನಿಕ ಭಾರತದಲ್ಲಿ ಮಾಡಿದ ಸಾಮಾಜಿಕ ಕ್ರಾಂತಿ, ರಾಜನೈತಿಕ, ಸಾಂಸ್ಕೃತಿಕ ಹಾಗೂ ಶೈಕ್ಷಣಿಕ ಕ್ರಾಂತಿಯ ಸೂತ್ರ ಪಾತವನ್ನು ನಾವು ನಿಜವಾದ ಸಮಗ್ರ ಕ್ರಾಂತಿಯೆಂದು ಹೇಳಬಲ್ಲೆವು. ರಾಷ್ಟ್ರೀಯ ಜೀವನದ ಯಾವುದೇ ಕ್ಷೇತ್ರವೂ ಅವರ ಸೂಕ್ಷ್ಮ ದೃಷ್ಟಿಗೂ, ಈ ಸಮಗ್ರ ಕ್ರಾಂತಿಯ ಕಾರ್ಯಕ್ರಮಕ್ಕೂ ಎಟಕದಿರಲಿಲ್ಲ.

ಪ್ರೇರಣೆ ಮತ್ತು ಪರಿಣಾಮದಲ್ಲಿ, ಈ ಕ್ರಾಂತಿ ಪೂರ್ಣರೂಪವಾಗಿ ಸ್ವದೇಶಿಯಾಗಿದ್ದು ಮಹರ್ಷಿ ದಯಾನಂದರು, ಇಂಗ್ಲೀಷರ ಜೀವನ ಪದ್ಧತಿ, ಭಾಷೆ, ಮತ್ತು ಸಂಸ್ಕೃತಿ ಶ್ರೇಷ್ಠವಾಗಿದೆ, ಆದನ್ನನುಸರಿಸಿಯೇ ಹಿಂದು ಸ್ಥಾನವು ಮೇಲೇಳ ಬಲ್ಲುದೆಂಬ ರಾಜಾರಾಮ ಮೋಹನರಾಯರ ವಿಚಾರ ಸರಣಿಯನ್ನು ದೃಢವಾಗಿ ಖಂಡಿಸಿದರು. ಭಾರತದ ದಾಸ್ಯ ಮತ್ತು ಅವನತಿಯ ಕಾರಣವು ಇಂಗ್ಲೀಷರ ಶ್ರೇಷ್ಠತೆಯಲ್ಲ, ಸಮಾಜದ ಆತ್ಮವಿಸ್ಮೃತಿ, ಮತ್ತು ಸಂಘಟನೆ ಮತ್ತು ರಾಷ್ಟ್ರೀಯ ಭಾವನೆಯ ಅಭಾವವೇ ಕಾರಣವೆಂದು ಸ್ವಾಮೀಜೀ ಕಂಡುಗಿದರು. ಆ ವಿಕಾರಗಳನ್ನೂ, ದುರ್ಬಲತೆಗಳನ್ನೂ ರಾಷ್ಟ್ರೀಯ ಭಾವನೆಯನ್ನು ಪುನಃ ಎಚ್ಚರಗೊಳಿಸಲಿಕ್ಕಾಗಿ ಸಮಾಜ ಮತ್ತು ದೇಶದ ಎದುರಿನಲ್ಲಿ ದೃಢದಾದ ಕಾರ್ಯಕ್ರಮವನ್ನಿಟ್ಟರು.

**ದೇಶದ ಏಕತೆಗಾಗಿ**

ಸಮಾಜದಲ್ಲಿ ಐಕ್ಯವನ್ನೂ, ರಾಷ್ಟ್ರೀಯ ಭಾವನೆಯನ್ನೂ ಜಾಗೃತಗೊಳಿಸಲಿಕ್ಕಾಗಿ ಅವರು ರಾಷ್ಟ್ರ ಭಾಷೆಯನ್ನಾಗಿ ಹಿಂದಿಯನ್ನು ಅಂಗೀಕರಿಸ ಹೇಳಿದರು. ಹಿಂದಿಯನ್ನು ರಾಷ್ಟ್ರ ಭಾಷೆಯ ಪೀಠಕ್ಕೇರಿಸುವ ಹಾಗೂ ಆದರ ರಾಷ್ಟ್ರವ್ಯಾಪೀ ಪ್ರಚಾರ ಮಾಡವ ಪ್ರಯತ್ನದ ಶ್ರೇಯಸ್ಸು ಮಹರ್ಷಿ ದಯಾನಂದರಿಗೂ ಅವರು ಸ್ಥಾಪಿಸಿದ ಆರ್ಯಸಮಾಜಕ್ಕೂಹೋಗುತ್ತದೆ.

ಸಮಾಜದ ಮಾನಸಿಕ ದುರ್ಬಲತೆಯನ್ನು ನೀಗಿ ಚೈತನ್ಯವನ್ನು ತುಂಬಲು ಅವರು ಇಂಗ್ಲೀಷರ ರಾಜ್ಯಸ್ಥಾಪನೆಯ ಅನಂತರ ಮೊಟ್ಟಮೊದಲು ಅವರು ದೇಶವನ್ನು ಸ್ವತಂತ್ರಗೊಳಿಸಲು ಆಹ್ವಾನ ನೀಡಿದರು. **ವಿದೇಶೀ ರಾಜ್ಯವು ಎಷ್ಟೇ ಒಳ್ಳೆಯದಾದರೂ ಅದು ಸ್ವರಾಜ್ಯದ ವಿಕಲ್ಪವಾಗಲಾರದು** ಎಂಬುದು ಅವರ ಮಂತ್ರವಾಗಿದ್ದು ತನ್ಮೂಲಕ ಸಮಾಜದಲ್ಲಿ ವ್ಯಾಪ್ತವಾದ ಹೀನಭಾವನೆಯನ್ನೂ (Inferiority Complex) ದಾಸ್ಯ ಭಾವನೆಯನ್ನೂ ಹೋಗಲಾಡಿಸ ಹೇಳಿ ಸ್ವತಂತ್ರತಾ ಸಂಗ್ರಾಮಕ್ಕೊಂದು ಹೊಸ ಆಯಾಮವನ್ನಿತ್ತರು. ಅವರ ಈ ಮೂಲಮಂತ್ರವನ್ನೇ ಆದರ್ಶವಾಗಿಟ್ಟುಕೊಂಡು ಮುಂದೆ ಲೋಕಮಾನ್ಯ ತಿಲಕರು "ಸ್ವರಾಜ್ಯ ನನ್ನ ಜನ್ಮ ಸಿದ್ಧವಾದ ಹಕ್ಕು, ಅದನ್ನು

ನಾನು ತೆಗೆದುಕೊಂಡೇ ಬಿಡುವೆ" ಎಂದು ಉದ್ಘೋಷಿಸಿದರು. ಮತ್ತು ಲಾಲ, ಬಾಲ, ಪಾಲರು ಮಹರ್ಷಿಯವರು ಪ್ರಾರಂಭಿಸಿದ ಕ್ರಾಂತಿಯನ್ನು ಮುಂದುವರಿಸಿದರು.

ಸಾಮಾಜಿಕ ಕ್ಷೇತ್ರದಲ್ಲಿ ಅವರು ಅಸ್ಪೃಶ್ಯತೆಯ ಹಾಗೂ ಜನ್ಮಗತ ಜಾತಿ ಪದ್ಧತಿಯ ಮೇಲೆ ಕೊಡಲಿ ಏಟು ಹಾಕಿದರು. ಸಮಾಜದ ಮೌಲಿಕ ಏಕತೆಯ ಆಧಾರವನ್ನು ಸ್ಪಷ್ಟವಾಗಿ ಎದುರಿಗಿಟ್ಟು ಅವರು ದೇಶದಲ್ಲಿ ಸಾಮಾಜಿಕ ಏಕತೆಯನ್ನೂ ಸಮತ್ವವನ್ನೂ ತರಲು ಸೂತ್ರ ಪಾತ ಮಾಡಿದರು. ಈ ಕಾರ್ಯಕ್ಕಾಗಿ ಅವರು ಕೊಟ್ಟ ರೀತಿ ಮತ್ತು ಕಾರ್ಯಪದ್ಧತಿ ಯನ್ನೂ ಹಿಂದೂ ಸಮಾಜದಲ್ಲಿ ಐಕ್ಯವನ್ನು ತರುವ ಸರಿಯಾದ ಮಾರ್ಗವೆಂಬ ಮಾತನ್ನು ಈಗ ಎಲ್ಲರೂ ಒಪ್ಪುತ್ತಿರುವರು.

**ನಾರೀ ಜಾಗರಣ**

ಸ್ತ್ರೀಯು ಮಾತೃ ಶಕ್ತಿಯಾಗಿರುವಳು. ಅವಳಿಗೆ ಸಮ್ಮಾನ ಪೂರ್ಣ ಹಾಗೂ ಸಮಾನ ಸ್ಥಾನವನ್ನೀಯದೆ ಯಾವ ಸಮಾಜವೂ ಉನ್ನತಿಯನ್ನು ಹೊಂದಲಾರದು. ಎಂದು ಮಹರ್ಷಿ ದಯಾನಂದರು ಹೇಳಿದ್ದು ಮಾತ್ರವೇ ಅಲ್ಲ, ಅದನ್ನು ಕಾರ್ಯಗತ ಮಾಡಲಿಕ್ಕಾಗಿ ಬಾಲ್ಯ ವಿವಾಹವನ್ನು ವಿರೋಧಿಸಿ, ವಿಧವಾವಿವಾಹ ಹಾಗೂ ಸ್ತ್ರೀಶಿಕ್ಷಣವನ್ನು ಸಮರ್ಥಿಸಿ ಪ್ರಬಲ ವಾದೊಂದು ಆಂದೋಳನವೇ ಎಬ್ಬಿಸಿದರು. ಇಂದು ದೇಶದಲ್ಲಿ ಒಬ್ಬ ಮಹಿಳೆ ಪ್ರಧಾನ ಮಂತ್ರಿ ಮಾತ್ರವೇ ಅಲ್ಲ, ಮಹಿಳೆಯರು ಪ್ರತಿಯೊಂದು ಕ್ಷೇತ್ರದಲ್ಲಿಯೂ ಮುಂದುವರಿ ಯುತ್ತಿದ್ದಾರೆ. ಮಹರ್ಷಿಯವರಿಂದ ಆರಂಭಿಸಲ್ಪಟ್ಟ ಸಮಗ್ರ ಕ್ರಾಂತಿಗೇ ಹೋಗುತ್ತದೆ ಇದರ ಶ್ರೇಯಸ್ಸು.

ಧಾರ್ಮಿಕ ದೃಷ್ಟಿಯಿಂದ ಹಿಂದೂ ಸಮಾಜವು ವಿವಿಧ ಅಂಧ ವಿಶ್ವಾಸಗಳಿಂದ ದಿಗ್ಭ್ರಮಿತವಾಗುತ್ತಿತ್ತು. ಬುದ್ಧಿಯ ಪರಿತ್ಯಾಗ ಮಾಡಿ ಅದು ಸ್ವಾರ್ಥೀ ಪಂಡಿತರಿಂದ ನಡೆಸ ಲ್ಪಟ್ಟ ಕುಚಕ್ರದ ಗಾಲಿಗೆ ಸಿಕ್ಕಿಹಾಕಿತ್ತು ಮತ್ತು ಮೂರ್ತಿ ಪೂಜೆಯ ಹಾಗೂ ವಿಭಿನ್ನ ಪಂಥ ಗಳ ಅಂಧಾನುಯಾಯಿಯಾಗಿತ್ತು. ಸ್ವಾಮೀಜೀ ತಮ್ಮ ಭಾಷಣಗಳಿಂದಲೂ, ಶಾಸ್ತ್ರಾರ್ಥಗ ಳಿಂದಲೂ ಸಮಾಜದಲ್ಲಿ ಧಾರ್ಮಿಕ ಕ್ರಾಂತಿಯನ್ನೆಬ್ಬಿಸಿ ಮತಮತಾಂತರಗಳ ಮೂಲಕ ಪ್ರತಿ ಪಾದಿಸಲ್ಪಟ್ಟ ಅಂಧ ವಿಶ್ವಾಸಗಳಿಂದಲೂ, ಕುತರ್ಕಗಳಿಂದಲೂ ಅದನ್ನು ಬಿಡಿಸಲು ಪ್ರಯತ್ನ ಪಟ್ಟರು.

**ರಾಷ್ಟ್ರೀಯ ಶಿಕ್ಷಣ**

ಶಿಕ್ಷಣವು ರಾಷ್ಟ್ರ ನಿರ್ಮಾಣ ಮತ್ತು ಚರಿತ್ರ ನಿರ್ಮಾಣದ ಸಶಕ್ತ ಸಾಧನವಾಗಿದೆ. ಅದುದರಿಂದಲೇ ಶಿಕ್ಷಣಕ್ಕೆ ರಾಷ್ಟ್ರೀಯ ರೂಪವನ್ನೀಯದೆ ನಿಜವಾದ ರಾಷ್ಟ್ರ ನಿರ್ಮಾಣದ ಕಲ್ಪನೆಯನ್ನು ನಾವು ಮಾಡಲಾರೆವು. ಮಹರ್ಷಿಯವರು ಈ ಸತ್ಯವನ್ನು ಮನಗಂಡು ಶಿಕ್ಷಾ ಕ್ಷೇತ್ರದಲ್ಲಿ ಕ್ರಾಂತಿಯನ್ನೆಸಗಲು ಆಹ್ವಾನವಿತ್ತರು. ಅವರು ಪ್ರತಿಪಾದಿಸಿದ ಗುರುಕುಲ ಶಿಕ್ಷಾಪ್ರಣಾಳಿಕೆ ಹಾಗೂ ಅವರ ಅನುಯಾಯಿಗಳ ಮೂಲಕ ನಡೆಸಲ್ಪಟ್ಟ ದಯಾನಂದ

ಸ್ಕೂಲ್ ಕಾಲೇಜುಗಳ ಮುಖಾಂತರ ಇಂಗ್ಲೀಷರ ಶಿಕ್ಷಣದ ಭಾರತೀಯಕರಣಪ್ರಯತ್ನವು ಶಿಕ್ಷಾಕ್ಷೇತ್ರದಲ್ಲಿಯೂ ನವಕ್ರಾಂತಿಗೆ ಸೂತ್ರ ಪಾತಮಾಡಿದೆ. ನಮ್ಮ ದುರ್ಭಾಗ್ಯದಿಂದ ಈ ಕ್ರಾಂತಿ ಇನ್ನೂ ಅಪೂರ್ಣವಾಗಿದೆ. ಸ್ವತಂತ್ರ ಭಾರತದ ಶಾಸನವು ಇಂಗ್ಲೀಷರ ಮಾನಸ ಪುತ್ರರ ಕೈಗೆ ಸೇರಿರುವುದರಿಂದ ಇಷ್ಟರ ವರೆಗೆ ಶಿಕ್ಷಣದ ಪೂರ್ಣ ಭಾರತೀಯ ಕರಣವಾಗಿಲ್ಲ. ಆದರಿಂದಾಗಿಯೇ ಭಾರತದಲ್ಲಿಂದು ಎಷ್ಟೋ ವಿಕೃತಿಗಳುಂಟಾಗಿವೆ.

ದೀರ್ಘ ದಾಸತ್ವದಿಂದಾಗಿ ಹಿಂದೂ ಸಮಾಜದ ಜೀರ್ಣಶಕ್ತಿ ಕುಂದಿಹೋಗಿತ್ತು. ವಿಧರ್ಮಿಗಳನ್ನೂ, ವಿದೇಶೀಯರನ್ನೂ ತಮ್ಮಲ್ಲಿ ಸೇರಿಸಿಕೊಳ್ಳುವ ಮಾತಂ ತಿರಲಿ, ಹಿಂದುಗಳು ತಮ್ಮವರನ್ನೇ ಹೊರದಬ್ಬಿ ಕ್ರೈಸ್ತ ಮುಸ್ಲಿಮರಾಗಲು ಸಹಾಯಕರಾಗಿದ್ದರು. ಇಂಗ್ಲೀಷರ ಸಂಪರ್ಕದಿಂದ ಜನಿಸಿದ ಏಂಗ್ಲೋ ಇಂಡಿಯನ್ ಜಾತಿಯಿಂದಾಗಿ ಈ ಪ್ರವೃತ್ತಿಗೆ ಮತ್ತೂ ಹೆಚ್ಚು ಪ್ರೋತ್ಸಾಹನೆ ದೊರೆಯಿತು. ಮಹರ್ಷಿದಯಾನಂದರು ಈ ಪ್ರವೃತಿಯನ್ನು ವಿರೋಧಿಸಿದ್ದು ಮಾತ್ರವಲ್ಲ, ಕ್ರೈಸರನ್ನೂ, ಮುಸ್ಲಿಮರನ್ನೂ ಪುನಃ ಹಿಂದುಗಳನ್ನಾಗಿ ಮಾಡಲು ಶುದ್ಧಿ ಹಾಗೂ ಭಾರತೀಯಕರಣದ ಶಂಖವನ್ನೂದಿದರು. ಮಹರ್ಷಿದಯಾನಂದರಿಂದ ಪ್ರಾರಂಭಿಸಲ್ಪಟ್ಟ ಈ ಕಾರ್ಯ ಇನ್ನೂ ಅಪೂರ್ಣವಾಗಿದೆ. ಈಗ ಆರ್ಯಸಮಾಜವಲ್ಲದೆ ಇತರ ಸಂಸ್ಥೆಗಳೂ ಸಹ ತಮ್ಮ ಮತಾಂತರ ಹೊಂದಿದ ಬಂಧುಗಳನ್ನು ಪುನಃ ಹಿಂದೂ ಸಮಾಜದಲ್ಲಿ ತರಲು ಮಹರ್ಷಿಯವರಿತ್ತ ಕಾರ್ಯಕ್ರಮವನ್ನು ಅಂಗೀಕರಿಸುತ್ತಿದ್ದಾರೆ.

### ಗೋವಂಶ ರಕ್ಷಣೆ

ಭಾರತದ ಆರ್ಥಿಕ ಜೀವನದ ಆಧಾರವು, ಕೃಷಿಯೂ, ಕೃಷಿಯ ಆಧಾರವು ಗೋವಂಶವೂ ಆಗಿದೆ. ಆದುದರಿಂದಲೇ ಜನನೀ ಮತ್ತು ಜನ್ಮ ಭೂಮಿಯ ಅನಂತರ ಗೋವಿಗೆ ತಾಯಿಯ ಸ್ಥಾನವಿತ್ತಿರುವರು. ಗೋಹತ್ಯೆಯಾಗದಿರುವುದು ಹಿಂದೂಸ್ಥಾನದ ಸ್ವಾತಂತ್ರ್ಯದ ಕುರುಹೆಂದು ಮೊದಲು ಭಾವಿಸಲಾಗಿತ್ತು. ಹಿಂದು ರಾಜ್ಯವಿದ್ದೆಡೆಗಳಲ್ಲೆಲ್ಲಾ ಗೋಹತ್ಯೆಯಾಗಲಾಗದು. ಮಹರ್ಷಿಯವರು ಗೋವಧೆಯ ವಿರುದ್ಧ ಹಾಗೂ ಗೋರಕ್ಷಣೆಯ ವಿಷಯವಾಗಿ ಪ್ರಭಾವ ಪೂರ್ಣಧ್ವನಿಗೂಡಿಸಿದ್ದರು. ಅದಕ್ಕಾಗಿ ಕಾರ್ಯ ಕ್ರಮವನ್ನೂ ಸಹ ಹಾಕಿಕೊಂಡಿದ್ದರು.

ಸ್ವದೇಶ ಹಾಗೂ ಸ್ವಸಂಸ್ಕೃತಿಯನ್ನು ಕುರಿತು ಶ್ರದ್ಧೆ ಹಾಗೂ ಗೌರವ ಭಾವನೆಯು ರಾಷ್ಟ್ರೀಯ ಗೌರವ ಮತ್ತು ರಾಷ್ಟ್ರ ಸಮ್ಮಾನದ ಆಧಾರವಾಗಿರುತ್ತದೆ. ಮಹರ್ಷಿದಯಾನಂದರು ವೇದಗಳನ್ನು ಭಾರತೀಯ ಸಂಸ್ಕೃತಿಯ ಆದಿಸ್ರೋತಸ್ಸಾಗಿದೆಯೆಂದು ಸಾರಿ ಜನರಲ್ಲಿ ಅವುಗಳ ಮೇಲೆ ಆದರ ಮತ್ತು ಗೌರವದ ಭಾವನೆಯನ್ನು ಜಾಗೃತಗೊಳಿಸಿ ಭಾರತದಲ್ಲಿ ದೇಶ ಭಕ್ತಿ ಹಾಗೂ ಸ್ವದೇಶೀ ಭಾವನೆಯನ್ನು ಎಚ್ಚರಗೊಳಿಸಲು ಮಹತ್ತ್ವಪೂರ್ಣ ಯೋಗದಾನವನ್ನು ಮಾಡಿದರು. ಆದಕಾರಣದಿಂದಲೇ ಭಾರತ ಸ್ವಾತಂತ್ರ್ಯ ಸಮರದಲ್ಲಿ ಋಷಿ ದಯಾನಂದರ ಅನುಯಾಯಿಗಳ ಸೇವೆ ಅತಿ ಹೆಚ್ಚಾಗಿತ್ತು.

ಈ ರೀತಿ ಭಾರತೀಯ ಜೀವನದ ಪ್ರತಿಯೊಂದು ಪಕ್ಷದಲ್ಲಿಯೂ ಮಹರ್ಷಿಯವರ ಅಮಿತ ಪ್ರಭಾವವಿದೆ. ಅವರೇ ಪದದಲಿತ ಹಾಗೂ ಪರತಂತ್ರ ಭಾರತದಲ್ಲಿ ಸಾಮಾಜಿಕ ಐಕ ಮತ್ಯ, ರಾಜನೈತಿಕ ಸ್ವಾತಂತ್ರ್ಯ ಮತ್ತು ಸಾಂಸ್ಕೃತಿಕ ಪುನರ್ಜಾಗರಣದ ಸೂತ್ರ ಪಾತ ಮಾಡಿ ದೇಶದ ಎದುರಿನಲ್ಲಿ ಸಮಗ್ರಕ್ರಾಂತಿಯ ರೂಪರೇಖೆಯನ್ನಿಟ್ಟದ್ದು ಮಾತ್ರವೇ ಅಲ್ಲ, ಅದನ್ನು ಕಾರ್ಯರೂಪವಲ್ಲಿ ತರಲು ಚೆನ್ನಾಗಿ ಪ್ರಯತ್ನ ಪಟ್ಟರು. ಆದುದರಿಂದಲೇ ಜನರು ಮಹರ್ಷಿ ದಯಾನಂದರನ್ನು ಭಾರತೀಯ ಸಮಗ್ರಕ್ರಾಂತಿಯ ಪ್ರಣೇತಾ ಹಾಗೂ ಅಗ್ರದೂತನೆಂದು ಸ್ಮರಿಸುತ್ತಾರೆ.

---

# ಅಸ್ತೇಯ ವೆಂದರೇನು ?

**(ಸುರೇಶಚಂದ್ರ ವೇದಾಲಂಕಾರ ಎಂ. ಎ. ಎಲ್. ಟಿ)**

ಗುಜರಾತದ ಭೂತ ಪೂರ್ವ ರಾಜ್ಯಪಾಲರಾದ ಸ್ವ. ಶ್ರೀ ಮನ್ನಾರಾಯಣರ ಚಿಕ್ಕ ದೊಂದು ಪುಸ್ತಕವನ್ನೋದುತ್ತಿದ್ದೆ. ಅದರಲ್ಲಿ ಒಂದು ಘಟನೆಯನ್ನು ಬರೆದಿದ್ದಾರೆ.

"ಆ ದಿನ ನಾನೊಂದು ಹರಿಕಥೆಯನ್ನು ಕೇಳಲು ದೇವಸ್ಥಾನಕ್ಕೆ ಹೋಗಿದ್ದೆ. ಸಾಮಾನ್ಯ ವಾಗಿ ನಾನು ದೇವಸ್ಥಾನಗಳಿಗೆ ಹೋಗುವುದಿಲ್ಲ. ಏಕೆಂದರೆ ಮೂರ್ತಿಪೂಜೆಯ ಮೇಲೆ ಅಭಿ ರುಚಿಯಾಗಲೀ, ವಿಶ್ವಾಸವಾಗಲೀ ನನಗಿಲ್ಲ. ಸಂಗೀತದ ಮೇಲೆ ಅಭಿರುಚಿಯಂತೂ ಧಾರಾಳ ವಾಗಿದೆ. ಆ ದಿನದ ಕೀರ್ತನಕಾರರು ಒಬ್ಬ ಪ್ರಸಿದ್ಧ ವ್ಯಕ್ತಿಯಾಗಿದ್ದರು. ದೇವಸ್ಥಾನದ ಹೊರಗೆ ಚಪ್ಪಲಿಯನ್ನು ತೆಗೆದಿಟ್ಟು ಒಳ ಹೋಗುವಾಗ – ಚಪ್ಪಲಿ ಹೊಸದು, ಇದನ್ನು ನೋಡಿ ಯಾರದಾದರೂ ಮನಸ್ಸಾಗ ಬಹುದೆ ?" ಎಂಬ ವಿಚಾರ ಮೂಡಿತು. ಚಪ್ಪಲಿಯತ್ತ ಯಾರದ್ದೂ ಕಣ್ಣು ಬೀಳದಿರಲೆಂದು ಅದನ್ನು ತಿರುವಿಟ್ಟು ಒಳಗೆ ಹೋದೆ. ಒಳಗೆ ಹೋದ ಅನಂತರವೂ ಅಲ್ಲಿದ್ದಷ್ಟು ಕಾಲ ಗಮನವಂತೂ ಹೊರಗೆ ಚಪ್ಪಲಿಯ ಮೇಲೆಯೇ ಇತ್ತು. ಕಥೆ ಕೇಳ ಬೇಕಾಗಿದ್ದಲ್ಲಿ ಹಳೆಯ ಚಪ್ಪಲಿಯನ್ನೇಕೆ ಹಾಕಿ ಬರಲಿಲ್ಲ ? ಎಂಬ ಪ್ರಶ್ನೆಯೂ ಮನಸ್ಸಿನಲ್ಲಿಯೇ ಮೂಡಿತು. ದೇವರ ದರ್ಶನಕ್ಕೆ ಬರುವವರು ಚಪ್ಪಲಿಯನ್ನೇಕೆ ಎತ್ತಿ ಕೊಂಡಾರು ? ಎಂಬ ವಿಚಾರವೂ ಬಂತು.

ಹರಿಕಥೆ ಮುಗಿದು ಜನರು ಪ್ರಸಾದ ಪಡೆಯುತ್ತಿರುವಾಗಲೇ ನಾನು ತಟ್ಟನೆ ಹೊರಗೆ ಬಂದೆ. ಸ್ವಲ್ಪ ಕತ್ತಲೆ ಕವಿದಿತ್ತು. ನಾನು ನನ್ನ ಟಾರ್ಚ್ ಹಚ್ಚಿ ನೋಡಿದೆ. ಚಪ್ಪಲಿ ಮಾತ್ರ ಎಲ್ಲಿಯೂ ಕಾಣಸಲಿಲ್ಲ. ಮೆಲ್ಲ ಮೆಲ್ಲಗೆ ಬಂದ ಜನರೆಲ್ಲ ಚದರಿಹೋದರು. ತಪ್ಪಿ ಯಾರಾ ದರೂ ನನ್ನ ಚಪ್ಪಲಿಕೊಂಡು ಹೋಗಿ ತನ್ನ ಹಳೆಯದನ್ನು ಬಿಟ್ಟು ಹೋಗಿರಬಹುದು. ಎಂದೆ ಣಿಸಿ ಅದನ್ನು ನೋಡಿದೆ. ಆದರೆ, ಬಿಟ್ಟಿದ್ದರೆ ತಾನೆ ಅದು ಸಿಕ್ಕಬೇಕು!"

ಧಾರ್ಮಿಕ ಭಾವನೆಯಿಂದ ನಾವು ಎಲ್ಲಾದರೂ ಹೋಗಿ ಚಪ್ಪಲಿ, ದೊಣ್ಣೆ, ಕೊಡೆ ಮತ್ತು ಬೂಟುಗಳನ್ನು ಕದಿಯುವ ಹವ್ಯಾಸವಿಟ್ಟು ಕೊಂಡಲ್ಲಿ ಆ ಧರ್ಮದ ಲಾಭವಾದರೂ ಏನು ? ಇದೇ ರೀತಿ ಕೊಡೆಯನ್ನು ಬದಲಾಯಿಸುವುದು. ಬೇರೆಯವರ ಪುಸ್ತಕವನ್ನು ತೆಗೆದು ಕೊಂಡು ಹೋಗಿ ತನ್ನ ಪುಸ್ತಕಾಲಯವನ್ನು ಅಲಂಕರಿಸುವುದು ಅಥವಾ ಉಪೇಕ್ಷೆಯಿಂದಲೋ ಆಲಸ್ಯದಿಂದಲೋ ಮರಳಿ ಕೊಡದಿರುವುದು, ವಾಚನಾಲಯಗಳಿಂದ ಪತ್ರಿಕೆಗಳನ್ನೆತ್ತಿಕೊಂಡು ಹೋಗುವುದು. ಪುಸ್ತಕಾಲಯದಿಂದ ಪುಸ್ತಕಗಳನ್ನು ಪಡೆದು ಅವುಗಳ ಹಾಳೆಗಳನ್ನೋ ಚಿತ್ರ ಗಳನ್ನೋ ಹರಿಯುವುದು. ಇವೆಲ್ಲಾ ಸಾಮಾನ್ಯ ಮಾತುಗಳಾಗಿವೆ, ಇವನ್ನು ನಾವು ಕೆಟ್ಟ ದೆಂದು ತಿಳಿಯುತ್ತಿಲ್ಲ. ನನ್ನ ಮಿತ್ರರೊಬ್ಬರು ನ್ಯಾಯಾಲಯದಲ್ಲಿ ನ್ಯಾಯಾಧೀಶರಾಗಿದ್ದ ತನ್ನ ಪರಿವಾರವನ್ನು ಬೇರೆಯವರ ಪಾಸನ್ನು ತೆಗೆದುಕೊಂಡು ಪರವೂರಿಗೆ ಕೊಂಡೊಯ್ಯು ತ್ತಾರೆ. ಅವರಿಗೆ ತನ್ನ ಪದವಿಯ ಗೌರವದ ಗಮನವೂ ಇರುವುದಿಲ್ಲ. ರೈಲ್ವೆಯ ನೌಕರರು ಟಿಕೆಟ್ ಪಡೆಯದೆ ಯಾತ್ರೆ ಮಾಡುವುದು ತಮ್ಮ ಅಧಿಕಾರವೆಂದು ತಿಳಿಯುತ್ತಾರೆ.

ಒಂದು ಸಲ ದೇವರಿಯಾ ಎಂಬಲ್ಲಿಂದ ಗೋರಖಪುರಕ್ಕೆ ಬರುತ್ತಿದ್ದೆ. ನನ್ನ ಬಲ ಬದಿ ಯಲ್ಲಿ ಇನ್ನೂ ಮೂರು ಜನ ಗೃಹಸ್ಥರು ಕುಳಿತಿದ್ದರು. ಅವರ ಮಾತಿನಿಂದ ಅವರು ರೈಲ್ವೇ ಕ್ಲರ್ಕರೆಂದು ತಿಳಿದುಬಂತು. ಟಿಕೆಟ್ ಚೆಕರನು ಒಬ್ಬ ಗ್ರಾಮೀಣನನ್ನು ಟಿಕೆಟ್ ಪಡೆಯದಿರು ವುದಕ್ಕಾಗಿ ದಂಡನೆಯಿತ್ತನು. ಮುಂದುವರಿದು ಆ ಮೂವರನ್ನೂ ಟಿಕೆಟ್ ಕೇಳಿದನು. ಅವರ ಹತ್ತಿರ ಟಿಕೆಟ್ ಇರಲಿಲ್ಲ. ಮಂತ್ರ ಮಾತ್ರ ಅವರಿಗೆ ಗೊತ್ತಿತ್ತು, ಮೊದಲನೆಯವನು ಗಂಭೀರವಾಗಿ ಆ ಮಂತ್ರ ಪಾಠ ಮಾಡಿದನು. **ಸ್ಟಾಫ್** ಎರಡನೆಯವನ ಮತ್ತು ಮೂರನೆ ಯವನ ಉತ್ತರವೂ ಅದೇ ಆಗಿತ್ತು. ಆ ಮೇಲೆ ನಾನಲ್ಲಿ ಕುಳಿತಿದ್ದೆ ನನ್ನ ಹತ್ತಿರ ಟಿಕೆಟಿತ್ತು ಆದರೆ **ಸ್ಟಾಫ್** ಮಂತ್ರ ಶಕ್ತಿಯನ್ನು ಪರೀಕ್ಷಿಸುವುದಕ್ಕಾಗಿ ನಾನೂ 'ಸ್ಟಾಫ್' ಅಂದೆ ತಮಗೆ ವಿಶ್ವಾಸವಾಗುವುದೋ ಇಲ್ಲವೋ ನಾಕಾಣೆ ಆತ ನನ್ನನ್ನೂ ಬಿಟ್ಟು ಮುಂದುವರಿದ. ಗೇಟಿನ ಹೊರಗೆ ಹೋಗುವಾಗಲೂ ನಾನು ಅವರ ಹಿಂದೆಯೇ ಹೋದೆ. ನಾನು ಮಾತ್ರ ಟಿಕೆಟ ಕೊಟ್ಟು ಆ ಕ್ಲರ್ಕ್‌ಗಳಿಗೆ ಅವರ ಕರ್ತವ್ಯವನ್ನು ಬೋಧಿಸಿದೆ. ಆದರೆ ನ್ಯಾಯಾಧೀಶರ ಬೇರೆಯವರ ಪಾಸನ್ನು ಪಯೋಗಿಸಿ ಯಾತ್ರೆಗೈಯುವ ಅನ್ಯಾಯವೆಸಗುತ್ತಿರುವಾಗ ಸಾಮಾನ್ಯ ಲಿಪಿಕರ ಮಾತಿಗೇನೆನ್ನೋಣ ?

ರೈಲ್ವೇ ಇಲಿಗಳ ವಿಷಯವಾಗಿ ಶ್ರೀ ಮನ್ನಾರಾಯಣರು ತಮ್ಮ ಪುಸ್ತಕದಲ್ಲಿ ಒಂದು ಘಟನೆಯನ್ನು ಬರೆದಿದ್ದಾರೆ. ಒಬ್ಬ ಸಾಹುಕಾರರ ಮನೆಯಲ್ಲಿ ವಿವಾಹ ಸಂದರ್ಭದಲ್ಲಿ ಒಂದು ದೊಡ್ಡ ಔತಣವಾಯಿತು. ರಾಶಿಗಟ್ಟಳೆ ಎಂಜಲು ಮಿಠಾಯಿ ತೋಟಿಗಳ ಪಾಲಿಗೆ ಬಂತು ಒಬ್ಬ ತೋಟಿಯ ಪಾಲಿಗೆ ಹೆಚ್ಚು ಬಂದಾಗ ಆತ ಅದನ್ನು ತನ್ನೊಬ್ಬ ನೆಂಟನಿಗೆ ಪಾರ್ಸೆ ಮಾಡಿ ಕಳುಹಿಸಿದನು. ನೆಂಟನು ಅದನ್ನು ಬಿಡಿಸ ಬಂದಾಗ ಮೊದಲು ದಕ್ಷಿಣೆ ಪಡೆ ಆಮೇಲೆ ಪಾರ್ಸೆಲ್ ಹೊರ ಹೋಗ ಬಿಡುವ ರೈಲ್ವೆಯ ಇಲಿಗಳು ಚೆನ್ನಾಗಿ ಮೆಲುಕು ಹಾ ತ್ತಿದ್ದವು. ತೋಟಿಯನ್ನು ಕಂಡು ಅವರು ಕೇಳಿದರು.

"ಏನಪ್ಪಾ ಏನು ?"

"ಬುದ್ಧಿ! ಒಂದು ಪಾರ್ಸೆಲಿದೆ." ಎಂದು ಆನೆಂಟ ಕೈಮುಗಿದು ಹೇಳಿದ.

"ನಿನ್ನ ಪಾರ್ಸೆಲೆ" ?

"ಹೌದು ಬುದ್ಧಿ, ಈ ರಸೀದಿ ನೋಡಿ"

ನಿನ್ನ ಹತ್ತಿರ ಇಷ್ಟೆಲ್ಲ ಮಿಠಾಯಿ ಯಾರು ಕಳುಹಿಸಿದರು"

"ಬುದ್ಧಿ! ಸಾಹುಕಾರರೊಬ್ಬರ ಮನೆಯಲ್ಲಿ ದೊಡ್ಡ ಔತಣವಾಯಿತಂತೆ. ತಿಂದುಳಿದ ಮಿಠಾಯಿಯನ್ನು ನಮ್ಮ ನೆಂಟ ಕಳುಹಿಸಿದ್ದಾನೆ. ಎಷ್ಟೋ ಎಂಜಲನ್ನು ಬಿಸಾಕಿದರಂತೆ"

ಇದನ್ನು ಕೇಳಿ ಆ ಇಲಿಗಳಿಗೆ ತಮ್ಮ ಮೇಲೆ ಬಹಳ ತಾತ್ಸಾರವಾಯಿತು. ಬಹಳವಾಗಿ ಹೇಸಿಕೊಂಡರು. ಆದರೆ ಆ ತಾತ್ಸಾರ ಎಷ್ಟು ದಿನಗಳವರೆಗೆ ಉಳಿದಿರ ಬಹುದು ? ಭಗವಂತ ನೇಬಲ್ಲ"

ರಾಷ್ಟ್ರವನ್ನು ನಿರ್ಮಲಗೊಳಿಸಿ ಅದಕ್ಕೆ ಸುಖವನ್ನೀಯ ಬೇಕಾದಲ್ಲಿ ಮತ್ತು ಮೇಲಿನ ಮಾತುಗಳಿಂದ ದೂರವಿರ ಬೇಕಾದಲ್ಲಿ ನಾವು ಅಸ್ತೇಯ ಪತ್ರವನ್ನು ಕೈಗೊಂಡು ವಾತಾವರ ಣವನ್ನು ಪವಿತ್ರಗೊಳಿಸಬೇಕು. ಹೇಗಾಗಬಲ್ಲುದು ? ನಾವು ಹೇಗೆ ತಾನೇ ಅಸ್ತೇಯ ವ್ರತೋ ಪಾಸಕರಾಗಬಲ್ಲೆವು ? ಮೊಟ್ಟ ಮೊದಲು ರಾಷ್ಟ್ರದ ಮುಖಂಡರು, ಸರಕಾರೀ ಅಧಿಕಾರಿಗಳು, ತಂದೆ ತಾಯಿಯಗಳು ಹಾಗೂ ಶಿಕ್ಷಕರು ತಾವಾಗಿ ನಿರ್ಮಲರಾಗಬೇಕು.

ಪರೀಕ್ಷೆಗಳಲ್ಲಿ ನಕಲು ಮಾಡುವುದೂ ಒಂದು ಕಳ್ಳತನವಾಗಿದೆ. ಇನ್ಸ್ಪೆಕ್ಟರರು ಪ್ರಧಾ ನಾಧ್ಯಾಪಕರಿಂದ ಅಕ್ಕಿ ಮುಡಿಗಳನ್ನಾಗಲೀ, ಪ್ರತಿದಿನ ಎಮ್ಮೆ ಹಸುಗಳ ಹಾಲನ್ನಾಗಲೀ, ತಮ್ಮ ಉಪಯೋಗಕ್ಕಾಗಿ ಕಾಲೇಜಿನ ಜೀಪನ್ನು ತೆಗೆದುಕೊಂಡು ತಿರುಗಾಡಿ ಸುಳ್ಳು ಸುಳ್ಳೇ ಬಿಲ್ಲುಗಳನ್ನೀಯುವುದಾಗಲೀ ಮಾಡಿದಲ್ಲಿ ಈ ನಕಲು ಹೊಡೆಯುವುದು ತಪ್ಪಲಾರದು. ಪ್ರಧಾನಾಧ್ಯಾಪಕರು, ಮ್ಯಾನೇಜರರು ಭ್ರಷ್ಟಾಚಾರ ಮತ್ತು ಲಂಚ ಗುಳಿತನದಲ್ಲಿ ನಿಮಗ್ನ ರಾಗಿದ್ದಲ್ಲಿ ವಿದ್ಯಾರ್ಥಿಗಳ ಚರಿತ್ರ ಶುದ್ಧಿ ಹೇಗೆ ತಾನೇ ಆಗಬಲ್ಲುದು ?

ತನ್ನದಲ್ಲದ ವಸ್ತುವನ್ನು ಯಾವುದಾದರೂ ಉಪಾಯ ಮಾಡಿ ತನ್ನದನ್ನಾಗಿ ಮಾಡು ವುದು ಸ್ತೇಯ ಭಾವನೆಯಾಗಿದ್ದು ಇದಕ್ಕೆ ವಿರುದ್ಧವಾದುದು **ಅಸ್ತೇಯವು**. ವ್ಯಾಪಾರಿಯು ಒಳ್ಳೇಯ ಹಣತೆಗೆದುಕೊಂಡು ನಕಲೀ ಮಾಲನ್ನು ಕೊಡಬಯಸಿದ್ದಲ್ಲಿ, ಧರ್ಮಗುರುಗಳು, ಪುರೋಹಿತರು, ಮೌಲ್ವಿ ಪಾದ್ರಿಗಳು ಧರ್ಮದ ಹೆಸರಿನಲ್ಲಿ, ತಮ್ಮ ಶಿಷ್ಯರನ್ನೂ, ಯಜಮಾನ ರನ್ನೂ ಸುಲಿಯುತ್ತ ಮೂರ್ಖರನ್ನಾಗಿಡ ಬಯಸಿದಲ್ಲಿ, ಕಚೇರಿಯ ಲಿಪಿಕರಾಗಲೀ. ನ್ಯಾಯಾ ಧೀಶರಾಗಲೀ ಲಂಚವನ್ನು ಪಡೆದು ನ್ಯಾಯವನ್ನು ಮಾರಬಯಸಿದಲ್ಲಿ ಇದೆಲ್ಲವೂ ಸ್ತೇಯ- ಕಳ್ಳತನವಾಗಿದೆ.

ಕೃಷಕರನ್ನು ಮಜೂರರನ್ನಾಗಿರಿಸಿ ಗುಲಾಮರಂತೆ ಅವರಿಗೆ ಕಷ್ಟವನ್ನಿತ್ತು ಅವರ ಮೂಲಕ ಬೆಳೆಯಲ್ಪಟ್ಟ ಧಾನ್ಯದಿಂದ ತಮ್ಮ ಕೊಪ್ಪರಿಗೆಯನ್ನು ತುಂಬಿ ಹಣವಂತರಾಗುವ ಜಮೀಂದಾರರೂ ಕಳ್ಳರಾಗಿರುವರು. ಮಜೂರರಿಂದ ಹತ್ತು ಹತ್ತು ಗಂಟೆಗಳ ತನಕ ಪಶುಗಳಂತೆ ದುಡಿಸಿ ಅವರಿಗೆ ಹೊಟ್ಟೆ ತುಂಬ ಅನ್ನವನ್ನು ನೀಡದ, ಅವರ ನಿವಾಸಕ್ಕಾಗಿ ಮನೆಯ ವ್ಯವಸ್ಥೆ ಮಾಡದ, ಅವರ ಮಕ್ಕಳು ಮರಿಗಳ ವಿಷಯವಾಗಿ ಯೋಚಿಸದ ಗಿರಣಿ ಮಾಲೀಕ ಉದ್ಯೋಗ ಪತಿಯೂ ಕಳ್ಳನಾಗಿರುವನು. ಕೃಷಕರ ಮೇಲೆ ಸಿಕ್ಕಾಪಟ್ಟೆ ಬಡ್ಡಿದರವನ್ನೇರಿಸುವ ಹೃದಯ ಹೀನ ಸಾಹುಕಾರನೂ ಕಳ್ಳನು.

ಗೋರಖಪುರದಲ್ಲಿ ಒಂದು ದಿನ ನನ್ನ ಅರ್ಧಾಂಗಿನಿಯ ಕಿವಿನೋಯ ತೊಡಗಿತು. ಒಬ್ಬ ಡಾಕ್ಟರನಿಗೆ ತೋರಿಸಿದೆ. ಆತ ಬಹಳ ಚಿಂತಾಮಗ್ನತೆಯನ್ನು ತೋರಿಸಿ ಹೇಳಿದ. "ಈಕೆಯನ್ನು ಮೊದಲೇ ತರಬೇಕಿತ್ತು. ಕಿವಿಯ ಪರದೆ ಗಾಯಗೊಂಡಿದೆ" ನಾನು ಬಹಳ ವಿನಯ ಪೂರ್ವಕವಾಗಿ ಪ್ರಾರ್ಥಿಸಿದೆ. ಆತ ಒಂದು ಔಷಧವನ್ನು ಕಿವಿಗೆ ಸುರಿದ. ಅದರಿಂದ ನೋವು ಕಿವಿಯಲ್ಲಿ ಮಾತ್ರವಲ್ಲ ಕಿವಿಯ ಅಕ್ಕಪಕ್ಕಗಳಲ್ಲಿಯೂ ಹರಿದು ಹೋಗಿ ಆಕೆ ಬಹುವಾಗಿ ಒದ್ದಾಡ ತೊಡಗಿದಳು. ನಾನು ಸಮಾಧಾನವಿತ್ತೆ ಹೆದರಬೇಡ, ಇದು ಔಷಧದ ರಿಏಕ್ಷನ್ ಆಗುತ್ತಾ ಇದೆ, ಐದು ರೂಪಾಯಿಗಳೂ ಖರ್ಚಾಗಿವೆ." ಆದರೆ ಆಕೆ ಪುನಃ ಆ ಡಾಕ್ಟರರಿಂದ ಮದ್ದು ತೆಗೆದುಕೊಳ್ಳಲು ಸಿದ್ಧವಾಗಲಿಲ್ಲ. ಆಗ ಇನ್ನೊಬ್ಬ ಡಾಕ್ಟರರ ಶರಣು ಹೋದೆ. ಅವರು ಕಿವಿಯನ್ನು ಪರೀಕ್ಷಿಸಿ ಹೇಳಿದರು. "ಕಿವಿಯಲ್ಲಿ ತೂತಾಗಿದೆ. ಮದ್ದು ಸುರಿಯುತ್ತೇನೆ. ಈ ಗುಳಿಗೆಗಳನ್ನು ತಿನ್ನಲು ಕೊಡಿರಿ". ಎಂದು ಹೇಳಿ ಮದ್ದು ಸುರಿದು ಕೆಂಪು, ಬಿಳಿ, ಅರಸಿನ ಬಣ್ಣದ ಗುಳಿಗೆಗಳನ್ನಿತ್ತು ಪ್ರತಿದಿನ ಹತ್ತುರೂಪಾಯಿಗಳನ್ನು ವಸೂಲು ಮಾಡಿದರು. ಐದು ದಿನಗಳ ಚಿಕಿತ್ಸೆ ಮಾಡಿದ ಮೇಲೆ ಸ್ಥಿತಿ ಮೊದಲಿಗಿಂತ ಹೆಚ್ಚಾಗಿಯೇ ಕೆಟ್ಟಿತ್ತು. ಆಗ ನಾನು ಕರ್ಣರೋಗ ವಿಶೇಷಜ್ಞರಾದ ಸರಕಾರೀ ಆಸ್ಪತ್ರೆಯ ಡಾಕ್ಟರರ ಹತ್ತಿರ ಕೊಂಡು ಹೋಗಿ ತನ್ನ ದುಃಖ ಕಥೆಯನ್ನು ತೋಡಿಕೊಂಡೆ. ಅವರು ಕಿವಿಯನ್ನು ನೋಡಿ ಚಿಂತಾಮಗ್ನರಾಗಿ ಬಹಳ ಪ್ರೀತಿ ಪೂರ್ವಕ ಮನೆಗೆ ಬರಹೇಳಿ ತನ್ನ ಫೀಸು 20ರೂ. ಯಾದರೂ ನನಗೆ 15ರೂ. ತೆರಹೇಳಿದರು. ಈ ನಡುವೆ ಹಳೆಯ ಡಾಕ್ಟರರೊಬ್ಬರನ್ನು ಭೇಟಿಯಾದಾಗ ಅವರು ಸಲಹೆಯಿತ್ತರು. ಇದು ಕಿವಿಯ ರೋಗವಲ್ಲ ಹಲ್ಲಿನ ಕ್ಯಾನ್ಸರ್ ಆಗಿದೆ. ಎಲ್ಲರೂ ಕ್ಯಾನ್ಸರ್ ಆಗಿದೆಯೆಂದು ಸಂಶಯ ಪಟ್ಟಾಗ ಆಕೆಯನ್ನು ದಂತ ವಿಶೇಷಜ್ಞ ಡಾಕ್ಟರರ ಹತ್ತಿರಕೊಂಡು ಹೋದೆ. ಅವರು ಅನುಭವ ವೃದ್ಧರಾಗಿದ್ದರು. ಆರ್ಯಸಮಾಜದ ಪ್ರೇಮಿಯಾಗಿದ್ದು ನನ್ನ ಪರಿಚಯ ಅವರಿಗಿತ್ತು. ಅವರು ಹೇಳಿದರು. ವೇದಾಲಂಕರರೆ! ಎಲ್ಲೆಲ್ಲಿ ಸುತ್ತಾಡಿದಿರಿ ? ನೀವು ಏನೂ ಮಾಡಬೇಡಿ. ಬರೇ ಹಲ್ಲುಗಳನ್ನು ತೆಗಿಸಿಬಿಡಿ. ಮೂರನೆಯ ದಿನ ಹಲ್ಲು ತೆಗಿಸಿದ್ದಾಯಿತು. ಕಿವಿನೋವು ಗುಣವಾಯಿತು. ಪರದೆಯ ತೂತು ಮಾಯವಾಯಿತು. ಕ್ಯಾನ್ಸರ್ ಇಲ್ಲವಾಯಿತು. ಇಂದಿಗೂ ಡಾಕ್ಟರರ ಈ ಲೂಟಿ ನೆನಪಾದಲ್ಲಿ ಎದೆ ನಡುಗಲಸುವಾಗುತ್ತದೆ. 8–10 ದಿನಗಳಲ್ಲಿ 500ರೂ.ಗಳು ಖರ್ಚಾದವು. ಆಗಿನ ನನ್ನ ಸಂಬಳದ ಒಂದೂವರೆಯಷ್ಟು ರೂಪಾಯಿಗಳು ದಕ್ಷಿಣೆಯಲ್ಲಿಯೇ ಹೋದವು.

ಡಾಕ್ಟರರು, ವಕೀಲರು, ಅಧ್ಯಾಪಕರು, ಪುರೋಹಿತರು, ಯಜಮಾನರು - ಎಲ್ಲರೂ ಸೇರಿ ರಾಷ್ಟ್ರೋತ್ಥಾನಕ್ಕಾಗಿ ಅಸ್ತೇಯ ವೃತ್ತಿಯನ್ನವಲಂಬಿಸಲು ಪ್ರಯತ್ನ ಪಡುವರೆ ?

ನಿಜವಾಗಿ ಹೇಳಬೇಕೆಂದರೆ, ಆವಶ್ಯಕತೆಗಳನ್ನು ಕಡಿಮೆ ಮಾಡುವುದೇ **ಅಸ್ತೇಯ** ಶಬ್ದದ ಇನ್ನೊಂದು ಅರ್ಥವು. ಸ್ವಾಮೀ ರಾಮತೀರ್ಥರು ಹೇಳಿದ್ದರು—ಆವಶ್ಯಕತೆಗಳನ್ನು ಎಷ್ಟು ಹೆಚ್ಚಿಸುವಿರೋ ಅವು ಅಷ್ಟೇ ಹೆಚ್ಚುತ್ತಾ ಹೋಗುವುವು. ಮಾನವನು ನೆರಳಿನ ಹಿಂದೆ ಓಡಿದ್ದಲ್ಲಿ ಅದೆಂದಿಗೂ ಕೈಗೆ ಎಟಕದು. ಬದಲಾಗಿ ಅದರ ಕಡೆಗೆ ಬೆನ್ನು ಮಾಡಿ ನಡೆದಲ್ಲಿ ಅದು ನಿಮ್ಮ ಹಿಂದೆ ಓಡಿಬರುವುದು. ಧನಸಂಪತ್ತುಗಳ ಸ್ಥಿತಿಯೂ ಇದೇ ಆಗಿದೆ. ಅವುಗಳ ಹಿಂದೆ ಓಡಿರಿ, ಅವು ಮುಂದೆ ಮುಂದೆ ಓಡುವವು. ಅವುಗಳಿಗೆ ಬೆನ್ನು ಮಾಡಿರಿ ಅವು ನಿಮ್ಮ ಹಿಂದೆ ಓಡುವುವು. ಬನ್ನಿರಿ, ನಾವು ಪರಮೇಶ್ವರನನ್ನು ಪ್ರಾರ್ಥಿಸೋಣ—

**ಅಗ್ನಿನಾ ರಯಿಮಶ್ನವತ್ ಪೋಷಮೇವ ದಿವೇ ದಿವೇ ।**
**ಯಶಸಂ ವೀರವತ್ತಮಂ** ॥ ಋಗ್ವೇದ ೧।೧।೩॥

ನಾವು ನಮ್ಮ, ಅಗ್ನಿನಾ - ಪುರುಷಾರ್ಥದ ಮೂಲಕ ಪ್ರತಿದಿನವೂ ಪೋಷಕವಾದ, ಯಶಸ್ಸನ್ನೂ, ಪರಾಕ್ರಮವನ್ನೂ ನೀಡುವ ಹಣವನ್ನು ಸಂಪಾದಿಸೋಣ.

---

# ಸಾರ್ವಜನಿಕರ ಅವಗಾಹನೆಗೆ

**ಪ್ರಿಯ ವೇದ ಧರ್ಮಾಭಿಮಾನಿಗಳಾದ ಬಂಧು ಭಗಿನಿಯರೇ** ಕಳೆದ ಜನವರಿ ತಿಂಗಳ ಸಂಚಿಕೆಯಲ್ಲಿ ಪ್ರಕಟಿಸಿದಂತೆ "**ವೈದಿಕ ಸಾಹಿತ್ಯ ಪ್ರಕಾಶನ ಸಮಿತಿ**"ಗೆ ಇನ್ನು ರೂ: **93,750-00** ರಷ್ಟು ಹಣದ ಕೊರತೆ ಇದೆ. ಈ ಕೊರತೆಯನ್ನು ಹೋಗಲಾಡಿಸದೆ ಪ್ರಕಾಶನದ ಕಾರ್ಯ ಮುಂದುವರಿಸುವುದು ಕಷ್ಟ ಸಾಧ್ಯ. ನಮ್ಮೆಲ್ಲರ ತಾಯಿಯಾದ "**ವೇದ ಮಾತೆಯ**" ರಕ್ಷಣೆಗಾಗಿ, ವೇದ ಜ್ಞಾನದ ಪ್ರಚಾರ, ವೈದಿಕ ಸಿದ್ಧಾಂತಗಳ ಪ್ರಸಾರವಾಗ ಬೇಕಾದುದು ಅತೀ ಅಗತ್ಯವೆಂಬುದನ್ನು ಎಲ್ಲವನ್ನೂ ತಿಳಿದ ತಮಗೆ ಪ್ರತ್ಯೇಕವಾಗಿ ಹೇಳ ಬೇಕಾಗಿಲ್ಲ. "**ಮಾತೃಋಣ**" ಪರಿಹಾರ ಬೇಕೆಂದು ಇಚ್ಛಿಸುವ ಸಾರ್ವಜನಿಕರೂ ಹಾಗೂ ನಮ್ಮ ಸದ್ಯಸರು ತುಂಬು ಹೃದಯದಿಂದ ಸಹಕಾರ ನೀಡಿ ಸಮಿತಿಯ ಮುಂದಿನ ಪ್ರಕಾಶನದ ಕೆಲಸಗಳು ಸಾಂಗವಾಗಿ ನೆರವೇರುವಂತೆ ಪ್ರಯತ್ನಿಸುವುದು ಅಗತ್ಯವೆಂಬುದನ್ನು ಈ ಮೂಲಕ ವಿನಂತಿಸುತ್ತಿದ್ದೇವೆ.—

ಈ ಬಗ್ಗೆ ತಮ್ಮನ್ನು ಪ್ರತ್ಯಕ್ಷವಾಗಿ ಸಂದರ್ಶಿಸಲು ಸಮಿತಿಯ ಕಾರ್ಯಕರ್ತರು ವಾಹನದ ಅಪಘಾತವಾದ ಅಂದಿನಿಂದ ಅಂದರೆ 14ತಿಂಗಳುಗಳಿಂದ ಹೊರಗೆ ಎಲ್ಲೂ ಸಂಚಾರ ಮಾಡಲು ಅಶಕ್ತರಾಗಿದ್ದಾರೆ. ಪ್ರಕಾಶನದ ಕಾರ್ಯದಲ್ಲಿ ವಿಚಾರಗಳ ಕಡೆಗೆ ಹೆಚ್ಚಿನ ಗಮನ

ವೀಯಲು ಸಾಧ್ಯವಾಗದೆ, ಸಾದಾಕಾಗದದಲ್ಲಿ ಪುಟಗಳನಷ್ಟೇ ತುಂಬಿಸಿ, **"ವೇದ ಪ್ರಕಾಶ ಸಜೀವವಾಗಿದೆ."** ಎಂಬುದನ್ನಷ್ಟೇ ತೋರಿಸಲು ಶ್ರಮಪಟ್ಟಿದ್ದೇವೆ. ನಮಗೆ ಇದರಿಂದ ಏನೂ ತೃಪ್ತಿ ಆಗಲಿಲ್ಲ. ಇದನ್ನು ತಿಳಿದುಕೊಂಡು ಪ್ರಿಯ ವಾಚಕರು ಮನ್ನಿಸಬೇಕಾಗಿ ವಿನಂತಿ.

ಬರುವ 9ನೇ ಸಂಪುಟದ ಬಗ್ಗೆ ಹೆಚ್ಚಿನ ಗಮನವಿಟ್ಟು ತಮ್ಮ ವಾಚಕರನ್ನು ತೃಪ್ತಿ ಪಡಿಸಬೇಕೆಂದು ಸಂಕಲ್ಪಿಸಿರುತ್ತೇವೆ. ಅದಕ್ಕಾಗಿ ತಮ್ಮೆಲ್ಲರ ಹೆಚ್ಚಿನ ಸಹಕಾರವನ್ನು ನಿರೀಕ್ಷಿಸುತ್ತಾ ಇದ್ದೇವೆ. ಆ ಬಗ್ಗೆ ಸಾರ್ವಜನಿಕರು ನಮ್ಮ ಸದಸ್ಯ ಬಳಗದವರೂ ತಮ್ಮ ಸಂಪತ್ತಿನ ಸ್ವಲ್ಪ ಭಾಗವನ್ನು ಏಕ ಗಂಟಿನಿಂದ ಅಥವಾ ತಿಂಗಳು, ತಿಂಗಳು, ಕಂತುಗಳ ರೂಪದಲ್ಲ ತಮಗೆ ಹೆಚ್ಚಿನ ಭಾರವಾಗದಂತೆ ದಾನವಾಗಿ ಕಳುಹಿಸಿ ಕೊಡಬೇಕಾಗಿ ಕಳಕಳಿಯ ಬಿನ್ನಹ: ಇದಕ್ಕೆ ಸಹಕಾರಿಯಾಗಿ ಇನ್ನು ಕೆಲವು ಯೋಜನೆಗಳನ್ನು ಈ ಕೆಳಗಿನ ವಿವರದಂತೆ ತಮ್ಮ ಮುಂದೆ ಇಡ ಬಯಸುತ್ತೇವೆ.-

1) ವರ್ಷಪೂರ್ತಿ ಬೇಕಾದಷ್ಟು ಉತ್ತಮವಾದ ಕಾಗದವನ್ನೂ ಒಂದೇ ಸಲ ನಾವು ಖರೀದಿಸ ಬೇಕಾಗಿದೆ. ಅದಕ್ಕಾಗಿ ತುಂಬಾ, ಹಣದ ಆವಶ್ಯಕತೆ ಇದೆ. ಆದುದರಿಂದ ತಮ್ಮ ಸದಸ್ಯ ತನವನ್ನು ನವೀಕರಿಸಲು, ಚಂದಾಹಣವನ್ನು ಪ್ರೀತಿ ಇಟ್ಟು M-O. ಮೂಲಕ ಕೂಡಲೇ ಕಳುಹಿಸಿರಿ; ಹಾಗೂ ತಮ್ಮ ಮಿತ್ರರನ್ನು ಬಂಧು ಬಾಂಧವರನ್ನು ಚಂದಾದಾರರಾಗು ವಂತೆ ಪ್ರಯತ್ನಿಸಿ ಸಹಕರಿಸಿರಿ—

2) ಈ ತನಕ ವಾರ್ಷಿಕ ಸದಸ್ಯರಾದವರಲ್ಲಿ ಅಜೀವ ಸದಸ್ಯರಾಗಲು ತಾವು ಈ ತನಕ ಕಟ್ಟಿದ ಹಣವನ್ನು ವಜಾಮಾಡಿ ರೂ 150/-ರ ಭರ್ತಿಗೆ ಉಳಿದ ಹಣವನ್ನು ಕಳುಹಿಸಿರಿ.

3) ಅಜೀವ ಸದಸ್ಯರಾದವರಲ್ಲಿ ಅನೇಕ ಶ್ರೀಮಂತರು ನಮ್ಮ ಸದಸ್ಯ ಬಳಗದಲ್ಲಿದ್ದಾರೆ. ಅಂತಹ ಮಹನೀಯರು ಮನಸ್ಸು ಮಾಡಿದರೆ ಆರ್ಥಿಕ ಸಮಸ್ಯೆ ಬೇಗನೇ ಪರಿಹಾರವಾಗ ಬಹುದು: ಅದು ಆಗದಿದ್ದರೆ ಮಹಾಪೋಷಕರಾಗಲು ರೂ 1001-00 ಯನ್ನು ಕಳುಹಿಸಿ ಸಹಕರಿಸ ಬೇಕಾಗಿ ವಿನಂತಿಸುತ್ತೇವೆ. ಮುಂದೆ ಪ್ರಕಟವಾಗುವ ಎಲ್ಲಾ ಗ್ರಂಥಗಳನ್ನು ಉಚಿತವಾ ಗಿಯೇ ಕಳುಹಿಸಲಾಗುವುದು. ತಮ್ಮ ಇಷ್ಟ ಮಿತ್ರರನ್ನು ಬಂಧು ಬಾಂಧವರನ್ನು ಅಜೀವ ಸದಸ್ಯರನ್ನಾಗಿಯೂ ಮತ್ತು ಮಹಾಪೋಷಕರಾಗಿಯೂ ಆಗುವಂತೆ ಪ್ರಯತ್ನಿಸಿ ಸಹಕರಿಸಿದರೆ, ನಮ್ಮ ಕೆಲಸಗಳಿಗೆ ಹೆಚ್ಚಿನ ಪ್ರೋತ್ಸಾಹ ನೀಡಿದಂತೆ ಆಗುವುದು. ಪರಮಾತ್ಮನು ಇಂತಹ ಮಹನೀಯರಿಗೆ ಪ್ರೇರಣೆ ನೀಡಬೇಕಾಗಿ, ಆ ದಯಾಮಯನಲ್ಲಿ ಪ್ರಾರ್ಥಿಸುತ್ತೇವೆ.

4) ಅನೇಕ ಮಹನೀಯರು ತಮ್ಮಲ್ಲಿ ಸರ್ವಸಂಪತ್ತು ಇದ್ದಾಗ್ಯೂ ಸತ್ಸಂತಾನ ಭಾಗ್ಯವಿ ಲ್ಲದೆ ದುಃಖಿತರಾಗಿರುತ್ತಾರೆ. ಇಂತಹ ಜನರಲ್ಲಿ ಪುಣ್ಯ ಪ್ರಭಾವದಿಂದ ಸಂತಾನವಾಗುವುದಿದೆ. ಆದುದರಿಂದ ಅವರು ಸಹ ತಮ್ಮ ಅನುಕೂಲತೆಗನುಸಾರ ಸಾಧ್ಯವಾದಷ್ಟು ದಾನಮಾಡಿ, ವೇದ ಮಾತೆಯ ಅನುಗ್ರಹಕ್ಕೆ ಪಾತ್ರರಾಗಿ, ಸಂತಾನ ಭಾಗ್ಯವನ್ನು ಪಡೆಯಲು ಸಾಧ್ಯವಿದೆ. ಪ್ರಾಯ ಮೀರಿದವರೆಲ್ಲ, ಅವರಿಗೆ ಈ ಜನ್ಮದಲ್ಲಿ ಸಂತಾನ ಭಾಗ್ಯವಿಲ್ಲವಾದಲ್ಲಿ ತಾವು

ಮಾಡಿದ ಸತ್ಕರ್ಮದ ಪ್ರಭಾವದಿಂದ ಬರುವ ಜನ್ಮವು ಉತ್ತಮವಾಗಿಯೂ, ಸತ್‌ಪುತ್ರರನ್ನು ಪಡೆಯುವ ಭಾಗ್ಯವಂತರೂ ಆಗುತ್ತಾರೆಂಬುದನ್ನೂ ಶಾಸ್ತ್ರಗಳಲ್ಲಿ ಹೇಳಲಾಗಿದೆ. ತಾವು ದಾನ ಮಾಡಿದ ಸಂಸ್ಥೆ ತಮ್ಮದೇ ಆದ ಧಾರ್ಮಿಕ ಸಂತಾನ ವೆಂಬುದನ್ನೂ ತಿಳಿಯಿರಿ.

5) ಅನೇಕ ವಿದ್ಯಾ ಸಂಸ್ಥೆಗಳಲ್ಲಿ ವೈದಿಕ ಸಾಹಿತ್ಯಕ್ಕೆ ಸಂಬಂದಪಟ್ಟ ಪುಸ್ತಕಗಳ ಕೊರತೆ ಇದೆ. ಅದನ್ನು ತುಂಬಿಸಲು ತಮಗೆ ಉಚಿತ ತೋರಿದ ವಿದ್ಯಾಸಂಸ್ಥೆಯ ಹೆಸರನ್ನು ಸೂಚಿಸಿದ್ದಲ್ಲಿ, ತಮ್ಮ ಹೆಸರನ್ನೇ ನಮೂದಿಸಿ, ತಾವು ಮಾಡಿದ ದಾನವೆಂದು ಆ ಸಂಸ್ಥೆಗೆ ತಿಳಿಸಿ, ನಿರಂತರ ಪತ್ರಿಕೆ ಮತ್ತು ಪುಸ್ತಕಗಳನ್ನು ಕಳುಹಿಸುತ್ತೇವೆ. ಅದರಿಂದ ಎಷ್ಟೋ ವಿದ್ಯಾರ್ಥಿಗಳಿಗೆ ಅಧ್ಯಯನ ಮಾಡಲು ಅವಕಾಶ ಮಾಡಿ ಕೊಟ್ಟಂತಾಗುವುದು. ಮುಂದಿನ ಜನಾಂಗವನ್ನು ಸಚ್ಚಾರಿತ್ರರೂ ಧರ್ಮಾತ್ಮರೂ ಸದಾಚಾರಿಗಳೂ ಆಗುವಂತೆ ಪ್ರಯತ್ನಿಸಲು ವೈದಿಕ ಸಾಹಿತ್ಯವು ಉತ್ತಮ ಸಾಧನವಾಗಿದೆ.

6) ಮಹಿಳೆಯರಿಗೆ ವೇದಾಧ್ಯಯನಕ್ಕೆ ಅಧಿಕಾರವಿಲ್ಲವೆಂದು ಕೆಲವು ಸ್ವಾರ್ಥಿಪುರುಷರು ಪ್ರತಿಬಂಧ ಹಾಕಿದ್ದಾರೆ. ಆದರೆ ಸ್ವಯಂ ವೇದಗಳು ಮಹಿಳೆಯರಿಗೆ ಪೂರ್ಣ ಅಧಿಕಾರವಿದೆಯೆಂದು ಸಾರುತ್ತವೆ. ಆದುದರಿಂದ ಅವರಿಗೆ ಅಧ್ಯಯನ ಮಾಡಲು ಪ್ರತಿ ಮನೆಯಲ್ಲಿಯೂ ಒಂದು ಚಿಕ್ಕ ಪುಸ್ತಕಾಲಯವನ್ನು ಇಡುವುದರಿಂದ ಮಹಿಳೆಯರಲ್ಲಿ ಜ್ಞಾನಾಭಿವೃದ್ಧಿ ಆಗುವುದಲ್ಲದೆ ಅವರಲ್ಲಿ ಹುಟ್ಟಿದ ಸಂತಾನಕ್ಕೆ ಚಿಕ್ಕಂದಿನಲ್ಲಿಯೇ ಶಿಸ್ತು ಬದ್ಧವಾಗಿ, ಸರಿಯಾದ ಮಾರ್ಗದರ್ಶನ ಮಾಡಲು ಅನುಕೂಲವಾಗುವುದು. ಈಗಿನ ಸಿನೇಮಾ ವಾತಾವರಣ ಮತ್ತು ಹೊಲಸು ರಾಜಕೀಯದ ವಿದ್ಯೆ ಹಾಗೂ ಅಶ್ಲೀಲ ಸಾಹಿತ್ಯ ತರುಣ ತರುಣಿಯರನ್ನೂ ದುರ್ಮಾಗ ಪ್ರವೃತ್ತರನ್ನಾಗಿ ಮಾಡುತ್ತಿರುವುದು, ಅವರ ನೈತಿಕ ಅಧಪತನವಾಗುತ್ತಿರುವುದೂ ಸರ್ವೇಸಾಮಾನ್ಯ. ಇದನ್ನೂ ತಪ್ಪಿಸಲು ಅವರು ಪ್ರಾಯ ಸಮರ್ಥರಾಗುವ ಮುಂಚೆಯೇ ಅವರಿಗೆ ಉತ್ತಮ ವೈದಿಕ ಸಾಹಿತ್ಯಗಳನ್ನು ಒದಗಿಸಿ ಕೊಡುವುದು, ಹೆತ್ತವರ ಕರ್ತವ್ಯ. ಆದುದರಿಂದ ಮಹಿಳೆಯರು ಹೆಚ್ಚಿನ ಸಂಖ್ಯೆಯಲ್ಲಿ ವೇದಪ್ರಕಾಶದ ಸದಸ್ಯರಾಗಿ ತಮ್ಮ ಅಜ್ಞಾನವನ್ನು ನೀಗಿಸಕೊಳ್ಳುವುದು ಅಗತ್ಯವಾಗಿದೆ. ವೈದಿಕ ಸಾಹಿತ್ಯ ಬಿಟ್ಟು ಇತರ ಸಾಹಿತ್ಯದಿಂದ ಕೇವಲ ಮನರಂಜನೆ ಮಾತ್ರ ಸಿಗಬಹುದು. ಆತ್ಮ ವಿಕಾಸವಾಗಲಾರದು. ಆತ್ಮ ವಿಕಾಸವಾಗದೆ, ಉತ್ತಮ ಗತಿಯಾಗಲೀ ಮೋಕ್ಷವಾಗಲೀ ಸಿಗುವುದು, ಕೇವಲ ಕನಸಿನ ಮಾತೇ ಸರಿ.

7) ಎಲ್ಲಾ ವಾಣಿಜ್ಯ ಸಂಸ್ಥೆಯವರು ಮತ್ತು ಉದ್ದಿಮೆದಾರರು, ಬ್ಯಾಂಕುಗಳೇ ಮೊದಲಾದ ವ್ಯವಸಾಯ ಸಹಕಾರಿ ಸಂಸ್ಥೆಗಳವರು ತಮ್ಮ ಜಾಹೀರಾತುಗಳನ್ನು ವೇದಪ್ರಕಾಶದಲ್ಲಿ ಪ್ರಕಟಿಸಲು ಕಳುಹಿಸಿ ಕೊಡಬೇಕಾಗಿ ಕಳಕಳಿಯ ಬಿನ್ನಹ ಅರ್ಥವು ಧರ್ಮದ ಮಾಧ್ಯಮದಲ್ಲಿಯೇ ಬೆಳೆಯಬೇಕೆಂದು ವೇದಗಳ ಮತ.

8) ಎಲ್ಲಾ ವಿದ್ಯಾ ಸಂಸ್ಥೆಯವರು ತಮ್ಮ ಲೈಬ್ರರಿಯಲ್ಲಿ ಇರುಗೊಡಿಸಲು **"ವೇದ-ಪ್ರಕಾಶ"** ಮಾಸ ಪತ್ರಿಕೆಯನ್ನು ಮತ್ತು ಇನ್ನು ಇತರ ಉಪಯುಕ್ತ ಗ್ರಂಥಗಳನ್ನು ತರಿಸಿ

ಕೊಳ್ಳುವುದಲ್ಲದೇ ತಮ್ಮ ಶಾಲಾ ವರ್ಧಂತ್ಯುತ್ಸವ ಕಾಲದಲ್ಲಿ ವಿದ್ಯಾರ್ಥಿಗಳಿಗೆ ಪಾರಿತೋಷಕ ವಾಗಿ ಕೊಡಲು ಬೇಕಾದ ಪುಸ್ತಕಗಳನ್ನೂ ಅಧಿಕ ಸಂಖ್ಯೆಯಲ್ಲಿ ತರಿಸಿ, ವಿದ್ಯಾರ್ಥಿಗಳಿಗೆ ಹಂಚಿ ಸದಾಚಾರ ಸಂಪನ್ನರಾಗಿ ಮಾಡುವುದು ಶಾಲಾ ಮುಖ್ಯೋಪಾಧ್ಯಾಯರ,ಪ್ರಧಾನ ಆಚಾರ್ಯರ ಕರ್ತವ್ಯ ಈ ಬಗ್ಗೆ ಸಂಬಂಧ ಪಟ್ಟವರು ಹೆಚ್ಚಿನ ಗಮನವಿತ್ತು **"ಆಚಾರ್ಯ ದೇವೊ ಭವ"** ಎಂಬುದನ್ನು ಸಾರ್ಥಕ ಗೊಳಿಸಬೇಕಾಗಿ ಪ್ರಾರ್ಥಿಸುತ್ತೇವೆ.

**ವಿ: ಸೂ:-** ನಮ್ಮ ಅನೇಕ ಸದಸ್ಯರಿಂದ ಬರಲಿರುವ ಹಣ 28,000ದಲ್ಲಿ ಈತನಕ ಬಂದದ್ದು ಕೇವಲ 2000 ಮಾತ್ರ. ಇನ್ನು ಉಳಿದ ಬಾಕಿ ರೂ. 26,000ವನ್ನು ಈ ಪತ್ರಿಕೆ ಮುಟ್ಟಿದೊಡನೆ ಪ್ರೀತಿಯಿಂದ ಸಂಸ್ಥೆಯ ಮೇಲಿನ ಅಭಿಮಾನದಿಂದಲಾದರೂ ಬೇಗನೆ ಕಳುಹಿಸಿ ನಮಗೆ ನೆರವಾಗಬೇಕಾಗಿ ಪುನಃ ವಿನಂತಿಸಿಕೊಳ್ಳುತ್ತೇವೆ.

**ವೈದಿಕ ಸಾಹಿತ್ಯ ಪ್ರಕಾಶನ ಸಮಿತಿ:**
ಕುಂಜಿಬೆಟ್ಟು, ಉಡುಪಿ ದ. ಕ
ಪಿನ್ 576 102



ಓಂ ಉದ್ಯಾನಂ ತೇ ಪುರುಷ ನಾವಯಾನಂ
ಜೀವಾತುಂ ತೇ ದಕ್ಷತಾತಿಂ ಕೃಣೋಮಿ ।
ಆ ಹಿ ರೋಹೇಮಮಮೃತಂ ಸುಖಂ
ರಥಮಥ ಜಿರ್ವಿರ್ವಿದಥಮಾ ವದಾಸಿ॥

[ಅಥರ್ವ ೮-೧-೬]

"ಓ ಮಾನವ! ನಿನ್ನ ಮಾರ್ಗ ಮೇಲ್ಮುಖವಾಗಿರಲಿ; ಊರ್ಧ್ವಗಮನ ನಿನ್ನದಾಗಲಿ ಎಂದಿಗೂ ಕೆಳಮುಖವಾಗದಿರಲಿ. ನಿನಗಾಗಿ ಜೀವನದ ಕಲೆಯನ್ನೂ ಜೀವನದ ಸಾಮರ್ಥ್ಯವನ್ನೂ ನೀಡುತ್ತೇನೆ. ನೀನು ಅಮೃತ ರೂಪಿಯಾದ, ಸುಖಕರವಾದ ಶರೀರ ರಥವನ್ನು ಏರು. ವಾರ್ಧಕ್ಯದಲ್ಲಿಯೂ ಸತ್ಯ ಜ್ಞಾನವನ್ನು ಪ್ರಸರಿಸಿ ಓಡಾಡುತ್ತಿರು, ನಿನ್ನ ಅನುಭವ ಜ್ಞಾನವನ್ನು ಸದುಪಯೋಗಗೊಳಿಸು."



Veda Prakash R. No. 2743/75 Regd No. KRNR 13/75-76